ಲಲಿತ ಸಾಹಿತ್ಯಮಾಲೆಯ ೪ನೆಯ ವರುಷದ ೨ನೆಯ ಕಂತು

# ಮುರುಕು ಮಂಟಪ

## ಮನೋವಿಶ್ಲೇಷಣಾತ್ಮಕ ಕಾದಂಬರಿ

ಎಸ್. ಅನಂತನಾರಾಯಣ

1947

ಲಲಿತ ಸಾಹಿತ್ಯಮಾಲೆ

ಧಾರವಾಡ

ಸಂಪಾದಕರು:

**ಗೋವಿಂದ ವೆಂಕಟೇಶ ಜುಳಕಿ**

ಮೊದಲನೆಯ ಮುದ್ರಣ : ೧೯೪೭

ಬೆಲೆ: ೦—೧೨—೦

ಮಾರಾಟಗಾರರು:

ಮನೋಹರ ಗ್ರಂಥಭಾಂಡಾರ, ಧಾರವಾಡ

ಕನ್ನಡ ಪುಸ್ತಕಾಲಯ, ಬೆಳಗಾವಿ

ಪ್ರಕಾಶಕರು:

ದ. ಬಾ. ಕುಲಕರ್ಣಿ

ಮನೋಹರ ಗ್ರಂಥಭಾಂಡಾ

ಧಾರವಾಡ

ಮುದ್ರಕರು:

ಎನ್. ಎಸ್. ಚೆಂ:

ವಿಜಯ ಮುದ್ರಾ.

ಧಾರವಾಡ

# ಅರಿಕೆ

ಲಲಿತ ಸಾಹಿತ್ಯಮಾಲೆ ತನ್ನ ನಾಲ್ಕನೆಯ ವರುಷದಲ್ಲಿ 'ಮುರುಕು ಮಂಟಪ'ವೆಂಬ ಈ ಪುಸ್ತಕದಿಂದ ಮುಂದುವರಿದಿದೆ ಇದು ಎರಡನೆಯ ಪುಸ್ತಕ.

ಮೈಸೂರಿನ ಶ್ರೀಯುತ ಎಸ್. ಅನಂತನಾರಾಯಣ ಬಿ. ಎ. (ಆನರ್ಸ್) ಅವರು ಈ ಕಾದಂಬರಿಯ ಲೇಖಕರು. ಶ್ರೀಯುತರು ಆಗಲೆ ಶರತ್ಕಾದಂಬರಿ' ಅನುವಾದಗಳ ಮೂಲಕ, ಇನ್ನೊಂದು ಕಾದಂಬರಿ–'ಪಯಣದ ಹಾದಿಯಲ್ಲಿ'–ಯ ಮೂಲಕ, ಈಚೆಗೆ ಪ್ರಕಟವಾದ 'ಬಾಡದ ಹೂ' ಕವನ ಸಂಗ್ರಹದ ಮೂಲಕ ಕನ್ನಡ ವಾಚಕರಿಗೆ ಸುಪರಿಚಿತರಾಗಿದ್ದಾರೆ. ಅವರ ಕೃತಿಯನ್ನು ನಾವು ಬಹಳ ಸಂತೋಷದಿಂದ ನಮ್ಮ ವಾಚಕರ ಕೈಯಲ್ಲಿ ಇತ್ತಿದ್ದೇವೆ. ಈ ಅವಕಾಶ ಕೊಟ್ಟುದಕ್ಕಾಗಿ ಶ್ರೀ. ಅನಂತನಾರಾಯಣರಿಗೆ ವಂದನೆಗಳು.

ಕಾಗದ ನಿಯಂತ್ರಣವಿನ್ನೂ ಇದೆ. ಅದು ಹೋದೀತೆಂದು ಈ ವರೆಗೆ ಇದ್ದ ...ಯೂ ಈಗಿಲ್ಲ. ಮೊನ್ನೆ ಸರಕಾರ ವೃತ್ತಪತ್ರಿಕೆಯ ಕಾಗದ ನಿಯಂತ್ರಣ ಸಡಿಲಿಸಿತು ಆದರೆ ಪುಸ್ತಕ ಪ್ರಕಾಶನದ ನಿಯಂತ್ರಣ ಹಾಗೇ ಇಟ್ಟಿರುವುದಾಗಿ ಸಾರಿದೆ. ಪುಸ್ತಕಗಳನ್ನು ಸಕಾಲಕ್ಕೆ ಪ್ರಕಟಿಸುತ್ತೇವೆ ಎಂದು ನಾವು ...ದರೂ ಸಾವಕಾಶವಾಗಿ ಬಿಡುತ್ತದೆ. ನಮ್ಮ ಗ್ರಾಹಕರು 'ದೊಡ್ಡ ಮನಸ್ಸು' ಮಾಡಬೇಕಾಗುತ್ತದೆ. ಎಲ್ಲ ಸೌಕರ್ಯ ಒದಗಿಬಂದಂದು ನಮ್ಮ ಪ್ರಕಾಶನಗಳು ಇನ್ನೂ ತುಂಬಿಕೊಂಡುದನ್ನು ಗ್ರಾಹಕರು ಕಾಣುತ್ತಾರೆಂದು ಸೂಚಿಸ ಬಯಸುತ್ತೇವೆ. ಈ ವರುಷದಲ್ಲೇ ಇದೊಂದು ಕಾದಂಬರಿಯಲ್ಲದೆ ಇನ್ನೆರಡು ಕಾದಂಬರಿಗಳು ಬರುತ್ತವೆ. ಮತ್ತೆ ಹೊಸ ರುಚಿಯ ಸಾಹಿತ್ಯ ಒದಗಿಸುವ ಯೋಜನೆಯೂ ಇದೆ. ಚಂದಾದಾರರು ಸಾವಧಾನದ ನಮ್ಮ ಸೇವೆ ಸ್ವೀಕರಿಸಬೇಕಾಗಿ ವಿನಂತಿ.

ಧಾರವಾಡ
೬–೧೯೪೭

ಪ್ರಕಾಶಕ
**ಲಲಿತ ಸಾಹಿತ್ಯಮಾಲೆ**

## ಲಲಿತ ಸಾಹಿತ್ಯಮಾಲೆಯ ಮುಂದಿನ ಪ್ರಕಟನೆಗಳು

### ಪತ್ರಿ ಸರಕಾರ

**ಶ್ರೀ. ಮಿರ್ಜಿ ಅಣ್ಣಾರಾಯರು**

ಸಾತಾರೆ ಜಿಲ್ಲೆಯ ರಾಜಕೀಯ ಕ್ರಾಂತಿಯನ್ನೇ
ಹಿನ್ನೆಲೆಯಾಗಿಟ್ಟುಕೊಂಡು ರಚಿಸಿದ ಕಾದಂಬರಿ

### ಎರಡನೆಯ ಸಂಬಂಧ

**ಶ್ರೀ. ಎನ್. ಕೆ. ಕುಲಕರ್ಣಿಯವರ**

ಸ್ವತಂತ್ರ ಸಾಮಾಜಿಕ ಕಾದಂಬರಿ

# ಮೊದಲ ಮಾತು



ಇದು ನನ್ನ ಮೊದಲನೆಯ ಕಾದಂಬರಿ. ನನ್ನ ಎರಡನೆಯ ಕಾದಂಬರಿ 'ಪಯಣದ ಹಾದಿಯಲ್ಲಿ' ಈಗಾಗಲೇ ಹೊರಬಿದ್ದಿದೆ. ಅದರಂತೆಯೇ ಇದೂ ಒಂದು ಪ್ರಯೋಗ. ಒಂದು ವ್ಯಕ್ತಿ ಬಾಲ್ಯ ದಾಟಿದ ಮೇಲೆ ಯೌವನಕ್ಕೆ ಕಾಲಿಡುವ ಪ್ರಾಯದಲ್ಲಿ ಅವನ ಮನಸ್ಸಿನ ಸ್ಥಿತಿ ಏನು, ಎಷ್ಟು ಸುಲಭವಾಗಿ ಅವನ ಹೃದಯದಲ್ಲಿ ಆಲ್ಲೋಲ ಕಲ್ಲೋಲವಾಗುತ್ತದೆ. ಹೊರಗಿನ ಸಣ್ಣ ಪುಟ್ಟ ಘಟನೆಗಳಿಂದ ಅವನ ಆಗಿನ ಅತಿಸೂಕ್ಷ್ಮ ಮನಸ್ಸಿನ ಮೇಲಾಗುವ ಪರಿಣಾಮವೇನು, ಅವನು ಹೇಗೆ ಚಂಚಲನಾಗಿ ಗಾಳಿ ಬೀಸಿದತ್ತ ಸಾಗುವ ಮೋಡದ ತುಣುಕಿನಂತಾಗುವನೆಂಬುದನ್ನು ಚಿತ್ರಿಸಲು ಈ ಕಾದಂಬರಿಯಲ್ಲಿ ಯತ್ನಿಸಿದ್ದೇನೆ. ಆನಂದನಂತಹ ಸೂಕ್ಷ್ಮಹೃದಯಿ, ಭಾವಗಳ ಒರೆಗಲ್ಲಿನ ಮೇಲೆ ಎಲ್ಲ ಅನುಭವಗಳನ್ನು ತಿಕ್ಕಿ ಪರೀಕ್ಷಿಸಿ ಮನನಮಾಡುವ ಭಾವಜೀವಿ, ಕಾಲೇಜಿನ ವಿಷಮವಾತಾವರಣದಲ್ಲಿ, ತನ್ನ ಬಾಳಿನ ಪರ್ವಕಾಲದಲ್ಲಿ, ಒಂದು ವರ್ಷ ಕಾಲದಲ್ಲಿ ಹೇಗೆ ಜೀವನದ ವಿಚಾರಗಳ ಧಾಳಿಗೆ ಸಿಕ್ಕಿ ಸೊರಗುತ್ತಾನೆ, ನೂರು ಬಗೆಯ ಸಣ್ಣ ಪುಟ್ಟ ಅನುಭವಗಳಿಂದ, ನೋವಿನಿಂದ ಅವನ ಹೃದಯ ಹೇಗೆ ವಿಶಾಲವಾಗುತ್ತದೆ, ವಿಚಾರ ತಿಳಿಯಾಗುತ್ತದೆ, ನೋಟ ಪಕ್ವವಾಗುತ್ತದೆಂಬುದೇ ಕಾದಂಬರಿಯ ವಸ್ತು. ಅಂತೆಯೇ ಇದು ಮನೋವಿಶ್ಲೇಷಣಾತ್ಮಕ ಕಾದಂಬರಿ. ಮನಸ್ಸಿನ ಆಗುಹೋಗುಗಳ ಚಿತ್ರಣ. ಅದರಿಂದಲೇ ಇಲ್ಲಿ ಹೊರಗಿನ ಘಟನೆಗಳಿಗಿಂತಲೂ ಮನಸ್ಸಿನಲ್ಲಾಗುವ ಬಗೆಗೆ ಹೆಚ್ಚು ಪ್ರಾಮುಖ್ಯತೆ. ಈ ದೃಷ್ಟಿಯಿಂದ ಕಾದಂಬರಿಯನ್ನೋದಬೇಕೆಂದು ಸಹೃದಯ ಗೆಳೆಯ-ಗೆಳತಿಯರಲ್ಲಿ ನನ್ನ ಕೇಳಿಕೆ.

ಇಲ್ಲಿ ಕಾಲೇಜಿನ ವಾತಾವರಣದ ವಿಷಯವಾಗಿ ನಾಲ್ಕು ಮಾತು ಕಟುವಾಗಿದೆ. ಟೀಕೆ ತೀಕ್ಷ್ಣವಾಗಿದೆ. ಆದರೆ ಕಾದಂಬರಿಯ ಪಾತ್ರ ಪೋಷಣೆಗೆ, ಒಂದು ಮನಸ್ಸಿನ ವಿಷಮನೋಟದ ಚಿತ್ರಣಕ್ಕೆ ಅದು ಅವಶ್ಯಕವಾಗಿತ್ತು. ಆನಂದನ ನಿರಸನಿ ( Cynical ) ನೋಟಕ್ಕೆ ಅದು ಹೇಗೆ ಕಾಣಿಸಿತೆಂಬುದರ ಆ ಚಿತ್ರಣ ಕಟುವಾಗಿಯೇ ತೀರಬೇಕಾಯಿತು.

ಇಲ್ಲಿ ಬರುವ ಪಾತ್ರಗಳಲ್ಲಿ ಅಕ್ಕ ಲಲಿತೆ—ನನ್ನ ಅಳಿದ ಅಕ್ಕನ ವ್ಯಕ್ತಿತ್ವದ ಒಂದು ಮಸಕು ನೆರಳು ಮಾತ್ರ. ಉಳಿದ ವ್ಯಕ್ತಿಗಳೂ ಜೀವಂತ ಜನರಿಂದ ಪ್ರೇರಿತ ಚಿತ್ರಗಳು. ಆದರೂ ಕಾದಂಬರಿಯಲ್ಲಿ ಕನ್ನಡಿ ಕಾಣುವ ತಪ್ಪನ್ನು ಯಾರೂ ಮಾಡಬಾರದೆಂದು ನನ್ನ ಆಸೆ, ಭರವಸೆ.

ನನಗೆ ಮೊದಲಿನಿಂದಲೂ ಒಂದು ಬಗೆಯಲ್ಲಿ, ಅಲ್ಲದಿದ್ದರೆ ಮತ್ತೊಂದು ಬಗೆಯಲ್ಲಿ ಉತ್ತೇಜನಕೊಟ್ಟ ಗೆಳೆಯ ಗೆಳತಿಯರಿಗೆ ನನ್ನ ನೆನಕೆಗಳು. ಈ ಕಾದಂಬರಿಯನ್ನೋದಿ ಅಲ್ಲಲ್ಲಿ ಸಲಹೆ ಕೊಟ್ಟ ಗೆಳೆಯರು, ಎಂ. ಶಂಕರ್, ಶೇಷಗಿರಿ ಮತ್ತು ರಾಮು ಇವರಿಗೂ ನನ್ನ ನೆನಕೆಗಳು. ಇದನ್ನು ಲಲಿತ ಸಾಹಿತ್ಯಮಾಲೆಯಲ್ಲಿ ಪ್ರಕಟಿಸಿದ ಗೆಳೆಯ ದತ್ತಾತ್ರೇಯ ಕುಲಕರ್ಣಿಯವರಿಗೆ ನನ್ನ ವಂದನೆಗಳು. ನನ್ನ ಉಳಿದ ಬರಹಗಳಿಗೆ ತೋರಿದ ವಿಶ್ವಾಸ, ಆದರಗಳನ್ನು ಕನ್ನಡಿಗರು ಇದಕ್ಕೂ ತೋರುವರೆಂದು ನನ್ನ ಎಣಿಕೆ, ನಂಬಿಕೆ.

ಇಂಟರ್ಮೀಡಿಯೆಟ್ ಕಾಲೇಜು
ಮೈಸೂರು
೧—೬—೧೯೪೭

ಎಸ್. ಅನಂತನಾರಾಯಣ

ಕಾಲದೀ ಕಾಗುಣಿತ
ಜೀವಿಗಳ ಎದೆ ಮೊರೆತ
ಎಣಿಸದೆಯೆ ಸಾಗುವುದು
—ಇದುವೆ ಬಾಳು!

ಅಕ್ಕನ ನೆನಪಿಗೆ

# ಮುರುಕು ಮಂಟಪ

## ೧

ಕಾಲುವೆಯ ನೀರು ಸಪ್ಪಳವಿಲ್ಲದೆ ಹರಿಯುತ್ತಿತ್ತು. ನಸುಕಿನ ಮಂಜಿನ ತೆರೆ ಎಲ್ಲವನ್ನು ಮುಸುಕುಗೊಳಿಸಿದ್ದುದು. ಈಗ ತೆಳ್ಳಗಾಗುತ್ತಿತ್ತು. ಕಾಲುವೆಯ ಪಕ್ಕದ ತೆಂಗಿನ ತೋಟ, ದೇವಸ್ಥಾನ, ಸುತ್ತಲಿನ ಮಾವಿನ ಮರಗಳು, ಪಕ್ಕದ ಕಾಲುಹಾದಿ, ಆ ಬದಿಯ ಸ್ಮಶಾನದ ಗೋಡೆ ಎಲ್ಲವೂ ಕೊಂಚಕೊಂಚವಾಗಿ ಸ್ಪಷ್ಟವಾಗುತ್ತಿದ್ದುವು. ಮುಂಜಾನೆಯ ಕೋಳಿಯ ಕೂಗಿಗೆ ದನಿಗೂಡಿಸಿದ ನಾಯಿಯ ಬೊಗಳುವಿಕೆಯ ಸದ್ದು ಗಾಳಿಯಲ್ಲಿ ತೂರಿ ಬರುತ್ತಿತ್ತು. ಸುತ್ತಲಿನ ಮೌನವನ್ನೊಡೆಯುವ ಈ ಸದ್ದಿಗೆ ಛಳಿಯಿಂದ ಸೆಟೆದ ನವಿಲುಗಳ ಕೊರಗಿನ ಕೂಗೂ ಆಗಾಗ ಕೂಡಿಕೊಳ್ಳುತ್ತಿತ್ತು.

ಕಾಲುವೆಯಲ್ಲಿ ಉಪಕರಣಗಳನ್ನು ತೊಳೆಯಲು ಬಂದ ಹೆಂಗಸರ ಬಳೆಯ ಝಣಕಾರ ಅಲೆಯ ಕುಣಿತಕ್ಕೆ ತಾಳಹಾಕುತ್ತಿತ್ತು. ಅವರುಸಿರು ಹಬೆಹಬೆಯಾಗಿ ಮೇಲೇರುತ್ತಿತ್ತು.

"ತಿಮ್ಮಕ್ಕ, ಆ ಶಾಲಿಗೇನವ್ವ ?"

"ಅದ್ಕೆಂಟಂತೆ—ಪ್ರೈನಾಗ್ತೈತಾ ?"

"ಬಣ್ಣ ಎಂಗೋ—"

"ಕಾತ್ರೆ ಅಂತೆ—ಅಂಗೇ ಈ ಕುಬ್ಸಾನೂ ಒಲಿಸ್ದೆ—ಎಂಗದೆ ?"

"ಪಸಂದಾಗದೆ."

ಮಾತಾಡುತ್ತಿದ್ದ ಇಬ್ಬರು ಹೆಂಗಸರ ಕಿವಿಗೂ ಒಂದು ಸಿಟ್ಟುಸಿರಿನ ದನಿ ಕೇಳಿ ಬಂತು. ಇಬ್ಬರೂ ಕೊಡಗಳನ್ನು ತಲೆಯ ಮೇಲಿಟ್ಟುಕೊಂಡು ಹೊರ

ಟರು. ಸಿಟ್ಟುಸಿರಿಟ್ಟ ವ್ಯಕ್ತಿ ದಡದ ಮೇಲಿನ ಬಂಡೆಯೊಂದರ ಮೇಲೆ ನಿಂತಿದ್ದ. ಕೆದರಿದ ಕೂದಲು ಬತ್ತಿದ ಗಲ್ಲ. ಯಾವುದೋ ಸಿಗಲಾರದ ಕಾಣಲಾರದ ವಸ್ತುವಿನಲ್ಲಿ ಲೀನವಾದ ಗುಳಿಬಿದ್ದ ಕಣ್ಣುಗಳು! ಅವನನ್ನು ಕಂಡೊಡನೆಯೇ ಹೆಂಗಸರಿಬ್ಬರೂ ಗುಸಗುಸ ಎಂದುಕೊಂಡು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಆ ವ್ಯಕ್ತಿಗೆ ಇದೊಂದೂ ಕಾಣಲಿಲ್ಲ. ದೂರದ ದಿಗಂತದಲ್ಲಿ ಅವನ ದೃಷ್ಟಿ ನಟ್ಟಿತ್ತು. ಅವನ ಮುಖದ ಮೇಲೆ ಬಿದ್ದ ಹಗಲಿನ ಕೆಂಗಿರಣಗಳಲ್ಲಿ ಅವನೆದೆಯ ಅವ್ಯಕ್ತ ಕೊರಗು ಹೊಳೆಯುತ್ತಿತ್ತು.

“ ಆನಂದಪ್ಪ! ”

“ ಅದೇಕಿಂಗಾಗೋದ್ರೇಂತೀನಿ ”

“ ಪಾಪ! ಮೈಸೂರ್ಗೇಗಿ ಇದ್ದೆ ಕಲ್ತು ಬತ್ತಾರೇತ— ”

“ ಎಲ್ಲಾ ಕರ್ಮ ಕಣವ್ವಾ ಕರ್ಮ! ಯಾರೇನ್ಮಾನೇ ಮಾಡೋ ಕಾಯ್ತದೆ? ”

“ ಮದ್ವೆ ಏನ್ರ ಮಾಡಿ, ಸೊಸೆ ತಂದ್ರೆ ಸರೋಯ್ತದೋ— ”

“ ಏಯ್, ಬುಡು ತಿಮ್ಮಕ್ಕ—ಆ ಎಡ್ತೀಂತ ಬಂದೋಳೂ ಮುಗೋಕೆ ”

“ ಪಾಪ! ಪಾರೋತವ್ವಾವ್ರು ಏಸೊಂದು ದುಕ್ಕಾ ಪಡ್ತಿ ಬೇಕು— ಅಂ ”

“ ಎಲ್ಲಾ ಕರ್ಮ ಕಣವ್ವಾ, ಕರ್ಮ. ”

ಮಾತನಾಡುತ್ತಾ ಅವರಿಬ್ಬರೂ ಅವನನ್ನು ಹಾದು ಹೋದರು. ಆದರೆ ಅವನಿಗೆ ಮಾತ್ರ ಅವರಿಬ್ಬರೂ ಕಣ್ಣಿಗೆ ಬೀಳಲಿಲ್ಲ. ಹಗಲಿನ ಕೆಂಗಿರಣಗಳಲ್ಲಿ ಕೆಂಪಾದ ಬಿಳಿಮೋಡದ ಹಿಂದೆ—ಯಾವುದೋ ದೃಶ್ಯ ಕಾಣುತ್ತಿದ್ದ. ಆ ದೃಶ್ಯ—ಹಲವಾರು ದಿನಗಳಿಂದ ಅವನ ತಲೆಯನ್ನು ಒಂದೇ ಸಮನಾಗಿ ಕೆದಕಿ, ಬೆದಕಿ ಸಂಕಟಕ್ಕೀಡು ಮಾಡುತ್ತಿದ್ದ ಆ ದೃಶ್ಯವನ್ನು ಒರೆಸಿ ಹಾಕಲು ಅವನಿಂದಾಗಿರಲಿಲ್ಲ. ದಿನೇ ದಿನೇ ಅದರ ಹಿಂಸೆ ಹೆಚ್ಚಾಗುತ್ತಿತ್ತು. ಭೂತದಂತೆ ಅವನನ್ನು ಎಲ್ಲೆಲ್ಲಿಯೂ ಕೊರಗಿಸುತ್ತಿತ್ತು.

ಒಂದು ತಿಂಗಳ ಹಿಂದಿನ ಮಾತು—ಪ್ರಾತಃಕಾಲ ಸುಮಾರು ಹತ್ತು ಗಂಟೆಯ ಸಮಯ. ಕಾಲೇಜು ಮೈದಾನದಲ್ಲಿ ಇಬ್ಬರು ನಿಂತು ಮಾತ

ನೋಡುತ್ತಿದ್ದರು. ಕುಕ್ಕನಹಳ್ಳಿಯ ಕೆರೆಯ ಅಲೆಗಳು ಸೂರ್ಯನ ಕಿರಣಗಳಲ್ಲಿ ಪಾದರಸದಂತೆ ಹೊಳೆಯುತ್ತಿದ್ದವು. ದಡಕ್ಕೆ ಬಂದು ಬಂದು ಬಡಿದು ತೆಪ್ಪಗಾಗುತ್ತಿದ್ದ ಅಲೆಗಳ ಏರಿಳಿತ ದೂರಕ್ಕೆ ಮಿನುಗುತ್ತಿತ್ತು. ಮಾತನಾಡುತ್ತಿದ್ದವರಿಬ್ಬರೂ ಆ ಕಡೆಗೇ ತಿರುಗಿ ಅದನ್ನೇ ದಿಟ್ಟಿಸುತ್ತಿದ್ದರು. ಬೆಳಕಿನ ಪ್ರತಿಬಿಂಬ ಅವರ ಮುಖದ ಮೇಲೆ ಕುಣಿದಾಡುತ್ತಿತ್ತು.

“ನೀವು ಹೇಳಿದುದೇ ಸರಿ, ಆನಂದ್” ಎಂದ ಅವರಲ್ಲೊಬ್ಬ ಇನ್ನೊಬ್ಬನ ಕಡೆ ತಿರುಗಿದ

ಆನಂದ ತನ್ನ ನೋಟ ತಿರುಸದೆ ಹಾಗೆಯೇ ಅವನ ಮಾತಿಗುತ್ತರ ಕೊಟ್ಟ. ಮುಖದಲ್ಲಿನ ಕಟುಭಾವ ಕೊಂಚವೂ ಬದಲಾಗಲಿಲ್ಲ.

“ಮನುಷ್ಯನೇ ಹಾಗೆ! ಆಸೆ ದುರಾಸೆಗಳ ಮೂರ್ತಿ ಮನುಷ್ಯ. ಯಾವುದನ್ನೋ ಬೇಕೆನ್ನುವುದು, ಬಯಸುವದು, ತನಗೆ ಸಿಗಲಾರದುದಕ್ಕಾಗಿ ಕಾತರಪಡುವುದು, ಒದ್ದಾಡುವುದು, ಸಿಕ್ಕದಿದ್ದರೆ ಸೇಡಿಗಾಗಿ ಕಂಡಕಂಡವರನ್ನೆಲ್ಲಾ ಹಿಂಸಿಸುವುದು—ಪ್ರತಿಯೊಂದು ನಡೆನಳಿಕೆಯಲ್ಲೂ ಇದಿದ್ದೇ ಇರುತ್ತದೆ. ಸ್ವಾರ್ಥ! ಸ್ವಾರ್ಥ! ಜಗತ್ತು ಹೇಸಿಗೆಯ ನರಕವಾಗಲು ಇದೇ ಕಾರಣ.”

ಆನಂದ ಉದ್ರೇಕಗೊಂಡು ಒಂದೇ ಸಮನಾಗಿ ತನ್ನ ಹೃದಯದಲ್ಲಿನ ವಿಷವನ್ನೆಲ್ಲಾ ಕಾರಿದ. ಆದರೆ ಉರಿಯುಗುಳಿದಷ್ಟು ಎದೆಯ ಬೇಗೆ ಹೆಚ್ಚಿತೇ ಹೊರತು ಕಡಿಮೆಯಾಗಲಿಲ್ಲ. ಅವನ ಸ್ನೇಹಿತ ಮಾತ್ರ ಮೌನವಾಗಿ ಅವನ ಮಾತನ್ನು ಕೇಳುತ್ತಿದ್ದ. ಅವನ ದೃಷ್ಟಿ ಆನಂದನ ಮುಖದಲ್ಲಿ ಕೇಂದ್ರವಾಗಿತ್ತು. ಅಷ್ಟರಲ್ಲಿ ಕಾಲೇಜಿನ ಗಂಟೆ ಹೊಡೆದ ಸದ್ದು ಕೇಳಿ ಇಬ್ಬರೂ ಕಾಲೇಜಿನ ಕಡೆಗೆ ಹೊರಟರು.

ಕಾಲೇಜಿನ ಅಂಗಳದಲ್ಲಿ ಹುಡುಗರು ನಾಲ್ಕೈದು ಮಂದಿಗಳ ಗುಂಪಾಗಿ ನಿಂತಿದ್ದರು. ಒಬ್ಬೊಬ್ಬರದು ಒಂದೊಂದು ಮಾತು—ಒಂದೊಂದು ಸರಣಿ

“ಬೋ—ಆಕೆಗೇನಾಯ್ತೋ ?”

“ಇಂ, ? —ಯಾರ್ಗೋ ?”

“ಅವಳಿಗೆ ಕಣೋ—ಅವಳು ಗೊತ್ತಿಲ್ವೇನೋ— ನಾವು Beauty queen ಅಂತಾ ಕೂಗಿ ಛೇಡಾಯಿಸ್ತಿರ್ಲಿಲ್ವೇನೋ—”

" ಓಹೋ ಅವಳೇ—ಪಾಸಾಯ್ತು "

" ಗೊತ್ತೇ ಇತ್ತು–ಎಷ್ಟಿದ್ರೂ Beauty queen ಅಲ್ವೇ ! ಪ್ರೊಫೆಸರ ಕೃಪೆ! "

ಗುಂಪಿನ ಹುಡುಗರೆಲ್ಲಾ ಗಹಗಹಿಸಿ ನಕ್ಕರು

ಮತ್ತೊಂದು ಗುಂಪಿನಲ್ಲಿ ಬೇರೆ ಯಾವುದೋ ವಿಚಾರ ಚರ್ಚೆಯಾಗುತ್ತಿತ್ತು.

" ಶಾಮೂಗೆ ಪರ್ಗ ಆಯ್ತಂತೋ "

" ಪ್ರೊಫೆಸರ್ ಶಾಮೂಗೇನೋ "

" ಪ್ರೊಫೆಸರ್ ಅಪಸ್ವರಲೆ ! ಶುದ್ಧ ಗೊಳ್ಳು ಕಣೋ "

" ಪಕ್ಕಾ Dunce ಅಂದರೆ ಶಾಮೂ "

" ಹೋದ್ರೆ ಅವನೇ ಹೋದ—ಇನ್ನೊಬ್ಬ ಅವ್ರಪ್ಪಾ ಬರ್ತಾನೆ "

" ಮತ್ತೆ–ಇನ್ನೊಂದು ನೋಡಿದ್ಯಾ–ಹೊಸದಾಗಿ ಇಬ್ರು ಮೇಷ್ಟ್ರು– "

" ಕಾಸಿಗೆ ದಂಡಾಂತಾರಲ್ಲಾ—ಆ ಜಾತಿ "

" ನೋಡೋ—ಏಯ್—ಅಲ್ಲಿ— "

ಎಲ್ಲರೂ ಆ ಕಡೆ ತಿರುಗಿದರು. ಮಹಡಿಯ ಮೇಲಿಂದ ವಿದ್ಯಾರ್ಥಿನಿಯರು ಕೆಳಗಿಳಿದು ಬರುತ್ತಿದ್ದರು. ಹುಡುಗರೆಲ್ಲರ ಕಣ್ಣು ಅವರ ಮೇಲೆಯೇ ಅವರಿಗೂ ಅದು ಗೊತ್ತು. ಅದಕ್ಕೇ ಅವರು ತಮ್ಮಿಂದಾದಷ್ಟು ಶೃಂಗಾರ ಮಾಡಿಕೊಂಡಿದ್ದರು. ತಮ್ಮ ಮೇಲೆ ಸಾವಿರ ಹಸಿದ ಕಣ್ಣುಗಳು ಬೀಳುತ್ತವೆಂದೇ ಅವರಲ್ಲಿ ಎಲ್ಲೂ ಇಲ್ಲದ ಠೀವಿ, ಗಾಂಭೀರ್ಯ. ಮನೆಯಲ್ಲಿ ಮುದುರಿಕೊಂಡಿರುತ್ತಿದ್ದವಳು ಕೂಡ ನಡಿಗೆಯಲ್ಲಿ ಮಹಾರಾಣಿಯ ಶ್ರೀಮದ್ಗಾಂಭೀರ್ಯ ತೋರುತ್ತಿದ್ದಳು. ಅವರೂ ತಮ್ಮಲ್ಲಿ ಹರಟೆ ಹೊಡೆಯುತ್ತಿದ್ದರು.

" ಲೇ ಸರೋಜ—ಕುಮುದ ಯಾಕೇ ಬರಲಿಲ್ಲ ? "

" ಏನೋಮ್ಮ—ಮೈಗೇನಾದರೂ Fever, ಗೀವರೋ ಏನೋ "

" No-no-no ಇಲ್ಲ ಕಣೇ—ಬೇರೆ Reason (ಕಾರಣ) ಇರಬೇಕು. ನಿನ್ನೆ ಸಂಜೆ ಚೆನ್ನಾಗಿದ್ಳು. "

"ನೋಡಿದ್ಯಾ—ಮರೆತೇ ಬಿಟ್ಟೆ. ಅವಳ ಗಂಡ ನಿನ್ನೆ ರಾತ್ರಿ ಬಂದ ನಂತೆ ಅನುಸೂಯಾ ಹೇಳ್ತಾ ಇದ್ದಳು. ಅದಕ್ಕೇ—ಎಷ್ಟಿದ್ದರೂ Husband and Wife ಅಲ್ವೇ "

"ಲೇ ಶಾರದಾ—ನಿನ್ನ Lover ಇವತ್ತು ಹೊಸ ಸೂಟಿನಲ್ಲಿ ಬಂದಿ ದಾನೆ "

"ಪಾಪ ! "

ಈ ಮಾತಿನ—ಮಲ್ಲಿಯರೂ ಮುಂದೆ ಹಾದಂತೆ ಹಿಂದೆ ಹಿಂದೆ ಹುಡುಗರೂ ತರಗತಿಗೆ ನಡೆದರು ಆನಂದನೂ ಅವನ ಜೊತೆಗಾರನೂ ಎಲ್ಲವನ್ನೂ ಕೇಳಿಕೊಂಡು ತರಗತಿಯ ಕಡೆಗೆ ತಿರುಗಿದರು. ತರಗತಿಯೊಳಗಿನಿಂದ ಸಂತೆಯ ಧ್ವನಿ ಕೇಳಬರುತ್ತಿತ್ತು. ಹುಡುಗರು ತಮಗಿಷ್ಟಬಂದಂತೆ ಹರಟೆ ಹೊಡೆಯುತ್ತಿದ್ದರು. ಯಾವುದಕ್ಕೂ ಗಮನ ಕೊಡುತ್ತಿರಲಿಲ್ಲ. ಉಪಾಧ್ಯಾಯರು ಒಳಕ್ಕೆ ಬಂದು ವೇದಿಕೆ ಹತ್ತಿ ಒರಲಿಕೊಳ್ಳಲಾರಂಭಿಸಿದರೂ ಸದ್ದು ಮಾತ್ರ ತಗ್ಗಲಿಲ್ಲ.

"ಯಾವುದೋ ಅದು ?—ಕೊಡೋಮ್ಮ ಇಲ್ಲಿ. "

"ಉಹುಂ "

"ಕೊಡೋಮ್ಮ ಅಂದ್ರೆ ಕೊಡಬೇಕು ನಿಮ್ಮ ತಾತನ ಗಂಟೇನೋ ಹೋಗೋದು ?" ಎನ್ನುತ್ತ ಪುಸ್ತಕ ಕಿತ್ತುಕೊಂಡ

"ಲೋ .... .... .... .... "

"ಏನೋ ? "

"ಆ ಹುಡುಗಿ .... .... "

"ಮೂರನೇಯವಳೇನೋ— "

"ಉಹುಂ—ಐದನೇಯವಳು—ರಾಧಾ ಕಣೋ ಏನು ಪೋಜ್ ಹಾಕ್ತಾಳೋ—"

"ನಿಮ್ಮೋಳು ನೋಡು—ಇವತ್ತು— ಎಷ್ಟು ಚೆನ್ನಾಗಿದ್ದಾಳೆ— ಆ ರಂಗುರಂಗಿನ ವಾಯಿಲುಸೀರೆ— ಆ ಒಂದೇ ಒಂದು ಗುಲಾಬಿ" ಪಕ್ಕದವ ನೊಂದು ತೀವ್ರ ನಿಟ್ಟುಸಿರುಬಿಟ್ಟ.

ಮತ್ತೊಂದು ಬೆಂಚಿನಲ್ಲಿ ಒಬ್ಬ ಯುವಕ ತನ್ನ ಪಕ್ಕದಲ್ಲಿದ್ದವನಿಗೆ ಸ್ನೋ, ಸೋಪು, ಕ್ರೀಂ, ಪೌಡರ್ ಕೇಶತೈಲಗಳ ವಿಚಾರವಾಗಿ ದೀರ್ಘ ಭಾಷಣ ಮಾಡುತ್ತಿದ್ದ. ಅವನು ಮುಗಿಸಿದುದೇ ತಡ ಅವನ ಪಕ್ಕದವನು. ಚಲನಚಿತ್ರಗಳು, ನಟರು, ನಟಿಯರ ವಿಚಾರವಾಗಿ ತಾನೂ ಕೊರೆದು ಕೊರೆತದಲ್ಲಿ ಒಬ್ಬರಿಗೊಬ್ಬರು ಕಡಿಮೆಯಿಲ್ಲನೆಂಬುದನ್ನು ಮನಗಂಡು ಇಬ್ಬರೂ ತೆಪ್ಪಗಾದರು.

ಹುಡುಗಿಯರು ಉಪಾಧ್ಯಾಯರ ಹಾವಭಾವಗಳನ್ನಣಕಿಸುತ್ತ ಮುಸಿ ಮುಸಿ ನಗುತ್ತಿದ್ದರು. 'ಮೂರ್ಖನ ಮಾತುಗಳು' ಎಂದು ತಮ್ಮ ಉಪಾಧ್ಯಾಯರ ವಿಚಾರವಾಗಿ ಬರೆದ ವ್ಯಂಗ್ಯ, ಕುಹಕಗಳ ಪುಸ್ತಕವೊಂದನ್ನು ಒಬ್ಬರಿಗೊಬ್ಬರು ತೋರಿಸಿ ಓದಿ ನಗುತ್ತಿದ್ದರು. ನಡುನಡುವೆ ಬಳೆಗಳನ್ನು ಘುಲಿಘುಲಿರೆನಿಸುತ್ತ ಸರಿಯುವ ಸೆರಗನ್ನು ಸರಿಪಡಿಸಿಕೊಳ್ಳುತ್ತಿದ್ದರು. ಇಲ್ಲವೇ ಸರಿಸುತ್ತಿದ್ದರು. ಅವರಲ್ಲೊಬ್ಬಳು ಕೊನೆಯ ಬೆಂಚಿನಲ್ಲಿ ಕುಳಿತಿದ್ದ ತನ್ನ ನಲ್ಲನಿಗೆ ಕಣ್ಣುಸನ್ನೆ ಮಾಡಿದಳು. ಅವನೂ ಕಣ್ಣು ಮುಚ್ಚಿ ನಕ್ಕನು.

ಆನಂದ ಕುಳಿತಿದ್ದ ಬೆಂಚಿನಲ್ಲಿ ಇಬ್ಬರು ಪಿಸಪಿಸನೆ ಮಾತನಾಡುತ್ತಿದ್ದರು

" ನೋಡೋ— ಇದರಲ್ಲಿ ಎಲ್ಲರ ಮನೆ ಅಡ್ರೆಸ್ಸು ಇದೆ. "

" ಎಲ್ಲರ ಮನೆ ಅಂದ್ರೆ— "

" ಅಯ್ಯೋ ಪೆದ್ದ! ಅವರ ಮನೆ—ಆ ಮುಂದಿನ ಬೆಂಚಿನ ರತಿಯರದು. ಅದು ತಿಳಿಯದಿದ್ದಮೇಲೆ ಕಾಲೇಜಿಗೆ ಕಾಲಿಟ್ಟು ಸಾರ್ಥಕವಾಯಿತು ಕಣೋ! "

" ಕೊಡಿಲ್ಲಿ ಹಾಗಾದರೆ "

" ಪರಭಾಷ ಅನ್ಕೋಮ್ಮ—ಕಷ್ಟಪಟ್ಟು ಎಲ್ಲರನ್ನು Follow ಮಾಡಿ ಹಿಂಬಾಲಿಸಿ) ತಿಳ್ಕೊಂಡು ಬರೆದಿರೋದು. "

" Rightho! ಸರಿ. "

ಅಷ್ಟರಲ್ಲಿ ಆನಂದನ ಮುಂದೆ ಒಂದು ಚೂರು ಕಾಗದ ಬಿತ್ತು. ಹಿಂದಿನ ಬೆಂಚಿನವನು ಬಗ್ಗಿ " ಸೋರ್‍ರಿ—ಮಿಸ್ಟರ್ ಆನಂದ್ — ಕೆಲವು Equations ಬರೆದಿದೆ. ಓದಿನೋಡಿ " ಎಂದ.

" ಮನುಷ್ಯ + ಕರಿಕೋಟು—ಮೆದುಳು =ಪ್ರೊಫೆಸರು.

" ಕಾಮನಬಿಲ್ಲು—ಆಕಾಶ + ಬೆಂಚು =ಹೆಂಗಸರ ಬೆಂಚು.

" ನಾನು + ಅವಳು = ಸ್ವರ್ಗ. "

ಆನಂದನ ಮುಖವನ್ನು ಆಗ ನೋಡಿದ್ದರೆ ಪುತ್ತಿ ಅವನನ್ನು ಮಾತ ನಾಡಿಸುವ ಗೋಜಿಗೆ ಯಾರೂ ಹೋಗುತ್ತಿರಲಿಲ್ಲ. ಆ ಕಾಗದದ ಚೂರನ್ನು ಕೊಟ್ಟವನ ಮೇಲೆ ಅವನಿಗೆ ಅಸಾಧ್ಯ ಕೋಪ ಬಂದಿತು. " ಥೂ ಹೀನಪಶು, ಕೀಳು ನಾಯಿ " ಎಂದುಕೊಂಡ ಮನಸಿನಲ್ಲೇ. ಮುಖ ಕೆಂಪಾಗಿ, ಕಣ್ಣು ಗಳು ಕಿಡಿ ಕಾರುತ್ತಿದ್ದವು. ಕೋಪದ ಭರದಲ್ಲಿ ಕೈಯಲ್ಲಿದ್ದ ಕಾಗದ ಚೂರು ಚೂರಾಯಿತು.

ತರಗತಿಯಿಂದ ಹೊರಬಂದೊಡನೆಯೇ ಆನಂದ ಕಂಡುದು ಗೋಡೆ ಗೊರಗಿ ನಿಂತಿದ್ದ ಒಬ್ಬ ವಿದ್ಯಾರ್ಥಿನಿಯನ್ನು. ಅವಳ ಸೆರಗು ಸರಿದು ಎದೆಯ ಬಹು ಭಾಗ ಹೊರಗೆದ್ದು ಕಾಣುತ್ತಿತ್ತು, ಜಡೆ ಎದೆಯಮೇಲೆ ಓಲಾಡು ತ್ತಿತ್ತು ಅದರ ತುದಿಯ ರಂಗಿನ ಟೇಪನ್ನು ಅವಳು ಕಟ್ಟುತ್ತಿದ್ದಳು. ಅವಳ ಮುಂದೆ ಅವಳನ್ನು ಮುಟ್ಟಿಯೂ ಮುಟ್ಟದಂತೊಬ್ಬ ಯುವಕ—ಇಬ್ಬರೂ ಏನೋ ಮಾತನಾಡುತ್ತಾ ನಗುತ್ತಿದ್ದನು.

" ನೋಡಿ ಆನಂದ್, ಅವನು ಅವಳ ಮುಂದೆ ಹೇಗೆ ಹಲ್ಲು ಕಿರಿಯು ತ್ತಿದಾನೆ " ಎಂದ ಆನಂದನ ಜತೆಗಾರ.

" ಆ ವಿಕಟ ನಗೆಯ ಹಿಂದೆ ಎಷ್ಟೊಂದು ವಿಷ ತುಂಬಿದೆ ಗೊತ್ತೇ ! " ಎಂದ ಆನಂದ.

" ಹೆಂಗಸರ ಮುಂದೆ ಇವರು ಹೀಗೇಕೆ ಆಡುವರೋ ಕಾಣೆ. "

" ಅವರಿಗೂ ಅದೇ ಬೇಕು. ಅವರಿಗೆ ಅದು ಸಾಮಾನ್ಯವಾಗಿ ಹೋಗಿದೆ. ಗಂಡಸರದೇ ತಪ್ಪು. ಎಲ್ಲಾದರೂ ಸೀರೆಯ ಸರಪರ ಶಬ್ದವೋ ಬಳೆಯ ಝುಣಝುಣಕಾರವೋ ಕಿವಿಗೆ ಬಿದ್ದರೆ ಸಾಕು ಮೈಯೆಲ್ಲಾ ಕಣ್ಣಾಗಿ ಆ ಕಡೆ ತಿರುಗುವುದು. ಇನ್ನು ಅವರ ರೂಪು, ಒನಪು, ವೈಯಾರ, ವೈಖರಿ ಗಳನ್ನು ವರ್ಣಿಸುವದು, ಹೆಂಗಸಿಗೆ ಒಂದು ಬಾರಿ ತನ್ನ ಶಕ್ತಿ ಗೊತ್ತಾದರೆ ಸಾಕು, ಬಲೆ ಬೀಸಿ ಬಿಡುವಳು. ಗಂಡಸು ಬಲೆಯಲ್ಲಿ ಬಿದ್ದು ವಿಲವಿಲನೆ

ಒದ್ದಾಡಬೇಕು ಅಷ್ಟೆ. ಅದಕ್ಕೇ ಈ ಹುಡುಗಿಯರ ಇಷ್ಟೊಂದು ಅಲಂಕಾರ. ಅದರಲ್ಲೂ ಈ ಕಾಲೇಜ ಕುಮಾರಿಯರಂತೂ ಅಬ್ಬಬ್ಬ !— ಕಲಿತವರೆಂಬ ಲೆಕ್ಕ—ಆದರೆ ಅವರ ನಡೆನುಡಿಯೆಲ್ಲ—ಹುಂ-ವಾರಾಂಗನೆಯರ ವಾರಗೆ ಯವರು ! ”

ಆನಂದ ಕಾಲೇಜಿನಿಂದ ಹಾಗೆಯೇ ಮನೆಯ ಕಡೆಗೆ ನಡೆದ. ಜಗತ್ತಿನಲ್ಲಿ ಸುಖವೆಂಬುದರ ಸುಳಿವು ಕೂಡ ಇಲ್ಲ. ದಯೆ, ಒಳ್ಳೆಯತನ, ಹಿರಿಯತನಗಳ ನೆರಳು ಕೂಡ ಕಾಣಲಸಾಧ್ಯ. ಜಗತ್ತೆಂದರೆ ಕೆಡುಕಿನ ಕೂಟ- ಸುಳ್ಳಿನ ಸಂತೆಯೆಂದು ಆನಂದನ ನಂಬುಗೆ. ಈ ಭಾವನೆ ಅವನ ಮಾತು ಮಾತಿನಲ್ಲೂ ಎದ್ದು ತೋರುತ್ತಿತ್ತು. ಜಗತ್ತೆಂದರೇ ತಾತ್ಸಾರ —ಹೆಣ್ಣೆಂದರೆ ತಿರಸ್ಕಾರ—ಇದರಿಂದ ಆನಂದನನ್ನು ಎಲ್ಲರೂ 'Cynic' (ನಿರಸನಿ) ಯೆನ್ನುತ್ತಿದ್ದರು. ಎಳೆತನದಲ್ಲಿಯೇ ಗಾಡಿಯಿಂದ ಕೆಳಕ್ಕೆ ಬಿದ್ದು ಆನಂದ ಕುಂಟಾದ. ಬಹಳ ಕಾಲ ನರಳಿದ. ತನ್ನ ಸ್ನೇಹಿತರೆಲ್ಲಾ ಕುಣಿದು ಕುಪ್ಪಳಿಸಿ ಕೇಕೆ ಹಾಕಿದಾಗ ತಾನೂ ಆಡಬೇಕೆಂಬ ಆಸೆಯಾಗುತ್ತಿತ್ತು. ಆದರೆ ಆ ಆಸೆ ಮೊಳಕೆಯಲ್ಲೇ ಮಣ್ಣಾಗುತ್ತಿತ್ತು. ಈ ವ್ಯಥೆ-ನಿರಾಸೆ ಎಳೆಯ ಮೆದುಳಿನ ಮೇಲೆ ತನ್ನ ಪ್ರಭಾವ ಬೀರಿತು. ಜಗತ್ತೆಂದರೆ ದುಃಖದ ಕಡಲೆಂಬ ಭಾವನೆ ಅವನ ಎದೆಯಲ್ಲಿ ಬೇರೂರಿತು. ಈ ಕಾರಣ ತಿಳಿದು ಯಾರಾದರೂ ವಿಶ್ವಾಸ ತೋರಿದ್ದರೆ ಆನಂದ ಬದಲಾಗುತ್ತಿದ್ದನೋ ಏನೋ—ಅಂತೂ ಅವನ ಪಾಲಿಗೆ ಪ್ರಪಂಚ ಸ್ವಾರ್ಥದ ಕಟ್ಟು.

* * * * *

ಆನಂದನನ್ನು ಒಂದು ನಿಮಿಷವೂ ಬಿಡದೆ ಹಿಂಸಿಸುತ್ತಿದ್ದ ದೃಶ್ಯ ಅದು: ಕಾಲುವೆಯ ದಡದಲ್ಲಿ ಒಂಡೆಯ ಮೇಲೆ ನಿಂತು ವಿಶಾಲಾಕಾಶದ ಶೂನ್ಯವನ್ನು ದಿಟ್ಟಿಸುತ್ತಿದ್ದಾಗ ಥಿಗ್ಗನೆ ಅವನ ಮುಂದೆ ನಿಂತ ದೃಶ್ಯ ಅದು ! ಆನಂದ ತಲೆ ಕೊಡವಿಕೊಂಡ. ತಲೆ ಚಿಂತೆಯಲ್ಲಿ ಸಿಡಿಯುತ್ತಿತ್ತು. ಕಾಲೇಜು ಜೀವನ ಅಷ್ಟು ಹೊಲಸೇ ? ತಾನು ಬರಿಯ ಕೆಡುಕನ್ನು ಮಾತ್ರ ಕಂಡು ಒಳ್ಳೆಯದನ್ನು ಮರೆತಿಲ್ಲವೇ ? ತಾನು ತಿಳಿದುಕೊಂಡಿರುವಷ್ಟು ಕೀಳಾಗಿಲ್ಲ ಕಾಲೇಜು ಎನ್ನಿಸಿತು ಮನಸಿಗೆ. ತಾನು ಕಂಡ ದೃಶ್ಯಕ್ಕೆ ಸರಿದೂಗುವ

ಒಳ್ಳೆಯ ದೃಶ್ಯವೂ ಇರಬಹುದು ಎಂದುಕೊಂಡ. ಆದರೆ ಅದನ್ನೊಪ್ಪಲು ಮನಸು ಮಾತ್ರ ಹಿಂಜರಿಯುತ್ತಿತ್ತು. ಹೇಗೋ ಅಂತೂ ನಾಳೆ ಮತ್ತೆ ಅದೇ ಕಾಲೇಜಿಗೆ ಹೋಗಲೇಬೇಕಲ್ಲಾ ಎಂದುಕೊಂಡು ಒಂಡೆಯ ಮೇಲಿಂದಿಳಿದು ಮನೆಯ ಕಡೆಗೆ ಹೊರಟ.

ಆನಂದ ಮನೆಯೊಳಕ್ಕೆ ಕಾಲಿಡುವ ವೇಳೆಗೆ ಗಡಿಯಾರ ಎಂಟು ಗಂಟೆ ಹೊಡೆಯುತ್ತಿತ್ತು. ಪಾರ್ವತಮ್ಮನವರು ಅಡಿಗೆ ಮನೆಯಲ್ಲಿದ್ದವರು ಅವನು ಬಂದ ಸದ್ದು ಕೇಳಿ ಹೊರಕ್ಕೆ ಬಂದರು.

"ಕಾಫಿ ತಣ್ಣಗಾಯ್ತಲ್ಲೋ ಮಗು. ಬೇಗ ಬರಬಾರದೇನೋ ? ಸ್ವಲ್ಪ ತಾಳು. ಬಿಸಿಗಿಡ್ತೀನಿ. ನೀನು ಬಟ್ಟೆ ಹಾಕ್ಕೊಂಡು ಬರೋಹೊತ್ತಿಗೆ ಕಾದಿರುತ್ತೆ" ಎನ್ನುತ್ತ ಕಾಫಿ ಬಿಸಿಗಿಡಲು ಹೋದರು.

ಆನಂದ ಅವರ ಮಾತಿಗೆ ಉತ್ತರ ಕೊಡಲೇ ಇಲ್ಲ. ಯಾವುದೋ ಅವ್ಯಕ್ತ ತಿಕ್ಕಾಟ, ಚಿಂತೆ, ಬಗೆಹರಿಯದ ಸಮಸ್ಯೆ ಅವನ ತಲೆಯನ್ನು ಕಿತ್ತು ತಿನ್ನುತ್ತಿತ್ತು. ಆದರ ಕಾವಿನಲ್ಲಿ ಅವನಿಗೆ ತಾನೆಲ್ಲಿದ್ದೇನೆ, ಏನು ಮಾಡ್ತಿದ್ದೇನೆಂಬುದೂ ಅರಿವಿರುತ್ತಿರಲಿಲ್ಲ. ಅಂಗಳದಲ್ಲಿ ನಿಂತವನು ಅದೆಷ್ಟೋ ಹೊತ್ತು ಹಾಗೆಯೇ ನಿಂತಿದ್ದ. ತಾಯಿ ಬಂದು ಕೂಗಿದಾಗ ಕೂಡ ಅವನಿಗೆ ಎಚ್ಚರವೇ ಇಲ್ಲ.

"ಮಗು—ಮಗೂ ಕಾಫಿ"

ಆನಂದ ಪರವಶನಾದಂತೆ ಹಾಗೆಯೇ ನಿಂತಿದ್ದ. ಪಾರ್ವತಮ್ಮನವರಿಗೆ ಗಾಬರಿಯಾಗಿ ಮತ್ತೆ ಇನ್ನೂ ಜೋರಾಗಿ ಎರಡು ಬಾರಿ ಕೂಗಿದ ಮೇಲೆಯೇ ಅವನಿಗೆ ಎಚ್ಚರ. ಕನಸು ಕಾಣುತ್ತಿದ್ದವನಂತೆ ಕಣ್ಣೊರಸಿಕೊಂಡು ಕಾಫಿಯ ಪಾತ್ರೆಯನ್ನು ಕೈಗೆತ್ತಿಕೊಂಡ ಆನಂದ. ಪಾತ್ರೆಯ ಬಿಸಿ ಕೈಸುಡಲು ಕೈಬಿಟ್ಟ ಕಾಫಿಯೆಲ್ಲಾ ಕೆಳಗೆ ಚೆಲ್ಲಿ ಹೋಯಿತು.

"ಹೋಗಲಿ ಬಿಡು. ಇನ್ನೊಂದು ಲೋಟ ಮಾಡಿಕೊಡುತ್ತೇನೆ" ಎಂದು ಪಾರ್ವತಮ್ಮನವರು ಅಡಿಗೆಮನೆಯೊಳಕ್ಕೆ ಹೋದರು. ಆನಂದನಿಗೆ ಏನಾಗಿ ಹೋಗಿದೆಯೋ ಏನೋ - ಯಾವಾಗ ನೋಡಿದರೂ ಏನೊ ಯೋಚಿಸುತ್ತಾ ಸುಮ್ಮನೆ ವಿಗ್ರಹದ ಹಾಗೆ ನಿಂತಿರುತ್ತಾನೆ. ಯಾತಕ್ಕೆ ಹೀಗೆ

ಎಂದು ಒಂದೇ ಸಮನಾಗಿಯೇ ಯೋಚಿಸುತ್ತಿದ್ದರು. ಆದರೆ ಅವನ ಮನಸಿನ ಸ್ಥಿತಿ ಅವರಿಗೆ ತಿಳಿಯುವ ಬಗೆಯಾದರೂ ಹೇಗೆ ?

ಆನಂದ ಮಾತಿಲ್ಲದೆ ಬೊಟ್ಟುಬೊಟ್ಟಾಗಿ ಕಾಫಿ ಕುಡಿಯುತ್ತಿದ್ದ. ಪಾರ್ವತಮ್ಮನವರು ಅವನ ಎದುರಿಗೇ ನಿಂತು ಒಂದೇ ಸಮನಾಗಿ ಅವನ ಕಡೆಯೇ ನೋಡುತ್ತಿದ್ದರು.

" ಯಾಕೋ ಸಪ್ಪಗಿದ್ದೀ ?–ಪಂಡಿತರಿಗಾದರೂ—"

" ಏನೂ ಇಲ್ಲಮ್ಮ. "

" ಏನೋಪ್ಪ— ಏನಂದ್ರೂ ಹೀಗೇ ಅಂತೀಯ, ಏನೂ ಇಲ್ಲಮ್ಮ, ಏನೂ ಇಲ್ಲಮ್ಮ. ಆದ್ರೆ ಯಾವಾಗ್ಲೂ ಏನಾದರೂ ಯೋಚನೆ ! ಎಲ್ಲೋ ನೋಡತ್ತಾ ಕೂತಿರೋದು. ಸರಿಯಾಗೊಂದು ಮಾತಿಲ್ಲ, ಕತೆಯಿಲ್ಲ. ಎಲ್ಲಾದಕ್ಕೂ ರೇಗೋದು ! "

" ಹೌದಮ್ಮ— ರೇಗೋದೇ ! "

" ನೋಡಿದ್ಯಾ—ಮೂಗಿನ್ತುದೀಲ್ಲೇ ಇರುತ್ತಲ್ಲೋ ಕೋಪ ! — ಯಾಕೆ ಹೀಗೆ ರೇಗ್ತಿಯೋ ದೇವರೇ ಬಲ್ಲ. ನಾನೇನ್ಮಾಡೋಕಾಗುತ್ತೆ— ನಿನ್ನನ್ನ ಇಷ್ಟುದಿನ ಹೊಟ್ಟೆಕಟ್ಟಿ ಬಟ್ಟೆಕಟ್ಟಿ ಸಾಕಿ ಸಲಹಿದ್ದಕ್ಕೆ ನನಗೆ ಇಷ್ಟೇ ! ಎಲ್ಲಾ ನನ್ನ ಕರ್ಮ ! ಪೂರ್ವಜನ್ಮದ ಕರ್ಮ ಅನುಭವಿಸಲೇ ಬೇಕು. "

ಆನಂದ ಸುಮ್ಮನೆ ಕುಳಿತಿದ್ದ. ಪಾರ್ವತಮ್ಮನವರು ತಮ್ಮಷ್ಟಕ್ಕೆ ತಾವು ಇನ್ನು ಏನೇನೋ ಗೊಣಗುಟ್ಟಿಕೊಳ್ಳುತ್ತಿದ್ದರು. ಆನಂದನ ಮನಸ್ಸು ಬಿರುಸಿನಲ್ಲಿ ತಳಮಳಿಸುತ್ತಿತ್ತು.

" ಕಾಲೇಜಿಗೆ ಹೋಗೋಲ್ಲವೇನೋ ? " ಎಂದರು ಪಾರ್ವತಮ್ಮ ಮತ್ತೆ.

" ಹೋಗ್ತೀನಮ್ಮ–ನಾಳೆ ಬೆಳಗ್ಗೆ ರೈಲಿಗೇ ಮೈಸೂರಿಗೆ ಹೋಗ್ತೀನಿ "

" ನೋಡಿಕೋಪ್ಪ. ಮೈ ಕೆಡಿಸಿಕೋ ಬೇಡ. ಮೈ ಚೆನ್ನಾಗಿಲ್ಲದಿದ್ದರೆ ಇನ್ನೂ ನಾಲ್ಕು ದಿನ ಬಿಟ್ಟುಕೊಂಡು ಹೋಗು. "

" ಇಲ್ಲಮ್ಮ— ಏನೂ ಇಲ್ಲ. ಕೊಂಚ ತಲೆನೋವು ಅಷ್ಟೆ "

" ಕಷಾಯ ಕಾಸಿ ಕೊಡಲೇನೋ ? "

"ಏನೂ ಬೇಡಮ್ಮ" ಎನ್ನುತ್ತಾ ಆನಂದ ಎದ್ದು ನಿಂತ.

"ಏನೋಪ್ಪ—ಎಲ್ಲಾ ನನ್ನ ಕರ್ಮ. ಆ ಶ್ರೀರಾಮನಿಗೆ ನನ್ನ ಮೇಲೆ ಯಾವತ್ತು ದಯ ಬರುತ್ತೋ—ಯಾವತ್ತು ಕಣ್ಣು ಬಿಟ್ಟು ನೋಡ್ತಾನೋ" ಎಂದುಕೊಂಡು ಪಾರ್ವತಮ್ಮನವರು ಕಾಫಿಯ ಬಟ್ಟಲನ್ನೆತ್ತಿಕೊಂಡು ಒಳಕ್ಕೆ ಹೋದರು. ಆನಂದ ನಿಂತವನು ಹಾಗೆಯೇ ತೆರೆದ ಕಣ್ಣಿನಿಂದ ಕಿಟಕಿಯಿಂದಾಚೆಗೆ ದಿಟ್ಟಿಸುತ್ತ ನಿಂತಿದ್ದ.

೨

ರೈಲಿನಿಂದಿಳಿದು ಮನೆಗೆ ಹೋಗುವ ವೇಳೆಗಾಗಲೇ ಬಹಳ ಹೊತ್ತಾಗಿತ್ತು. ಇನ್ನು ಊಟಮಾಡಲು ಕುಳಿತರೆ ಕಾಲೇಜಿಗೆ ಹೊತ್ತಾಗಿ ಹೋಗುವದೆಂದು ಆನಂದ ಹಾಗೆಯೇ ಹೊರಡಲನುವಾದ.

"ಆನಂದ, ಊಟಮಾಡಿಕೊಂಡು ಹೋಗೋ"

"ಇಲ್ಲಕ್ಕ—ಬಹಳ ಹೊತ್ತಾಗಿಹೋಯ್ತು"

"ಮೊದಲನೆಯ ಪೀರಿಯಡ್ ಹೋದರೂ ಪರವಾಗಿಲ್ಲ. ಹಸಿದುಕೊಂಡೇ—"

"ಇಲ್ಲಕ್ಕ—ಊಟ ಬೇಡ" ಎನ್ನುತ್ತಾ ಆನಂದ ನಡೆದೇ ಬಿಟ್ಟ.

ಆನಂದನ ಅಕ್ಕ ಲಲಿತ ನಿಟ್ಟುಸಿರುಬಿಟ್ಟು ಒಳಕ್ಕೆ ಹೋದಳು

ಆನಂದನಿಗೆ ಬಹಳ ಅಸಮಾಧಾನ. ಲಲಿತ ಬಲವಂತಮಾಡಿ ಮನೆಯಲ್ಲಿಯೇ ಉಳಿಸಿಕೊಂಡು ಅನ್ನ ಹಾಕಬೇಕಾಗಿತ್ತು. ಆದರೆ ತಾನು ಊಟ ಬೇಡವೆಂಬುದಕ್ಕೆ ಒಪ್ಪಿ ಸುಮ್ಮನಾದಳಲ್ಲಾ—ಎಂತಹ ಅಪರಾಧ!

ಹಿಂದೆ ಒಂದು ದಿನ ಲಲಿತ ಚಕ್ಕಲಿ ಮಾಡುತ್ತಿದ್ದಳು. ಆನಂದನಿಗೆ ಚಕ್ಕಲಿ ಕಂಡರೆ ಬಹಳ ಇಷ್ಟವೆಂದು ಅವಳಿಗೆ ಗೊತ್ತಿತ್ತು. ಅವನಿಗೋ ಅಡಿಗೆ ಮನೆಗೆ ಹೋಗಬೇಕೆಂದು ಆಸೆ. ಆದರೆ ಅವಳು ಕರೆಯದೆ ಹೋಗಲು ಬಿಗುಮಾನ. ಹೀಗಾಗಿ ವಾಸನೆಯನ್ನೇ ಕುಡಿದು ಅಸಮಾಧಾನದಿಂದ ತನ್ನ ಕೋಣೆಯಲ್ಲಿ ಕುಳಿತಿದ್ದ. ಕೆಲವು ನಿಮಿಷಗಳಾದ ಮೇಲೆ ಲಲಿತ ಅವನನ್ನು

ಕೂಗಿದಳು. ಆನಂದ ಮೊದಲು ಹಿಂಜರಿದರೂ ಆ ಮೇಲೆ ಹೋಗಿ ಕುಳಿತ ಅಕ್ಕ ಕೊಟ್ಟ ಚಕ್ಕಲಿಯನ್ನು ಕೈಗೆತ್ತಿಕೊಂಡ. "ಮಾಮ, ಮಾಮ" ಎನ್ನುತ್ತಾ ಮಕ್ಕಳು ಸುತ್ತಿಕೊಂಡರು.

"ನೀನು ತಿನ್ನು, ಆನಂದ. ಅವರಿಗೆಲ್ಲಾ ಆಗಲೇ ಕೊಟ್ಟಾಗಿದೆ ಎಂದಳು ಲಲಿತ.

ನನಗೆ ಕೊಡುವ ಮೊದಲೇ ಈ ಮಕ್ಕಳಿಗೆ ಕೊಟ್ಟಿರುವಳಲ್ಲಾ ಎಂದು ಆನಂದನ ಮನಸಿನಲ್ಲಿ ವಿಪರೀತ ಸಿಡುಕಾಯಿತು! ಲಲಿತ ಒಂದೆರಡು ಬಾರಿ, ಹುಡುಗರನ್ನು ಗದರಿಕೊಂಡರೂ ಮಕ್ಕಳು ಅವನ ಹತ್ತಿರದಿಂದ ಹೋಗ ಲಿಲ್ಲ. ಕೊನೆಗೆ ಲಲಿತ ಸಿಡುಕಿನಿಂದ ಕಿರಿಯಮಗ ನಾಣಿಯನ್ನು ಬೈದಳು.

"ಲೋ— ಬಕಾಸುರನ ಹಾಗೆ ಆಡ್ತೀಯಲ್ಲೋ ಆನಂದನಿಗೆ ಕೊಟ್ಟಷ್ಟೇ ನಿನಗೂ ಕೊಟ್ಟಿದೀನಿ, ಇಷ್ಟಾದರೂ ಇನ್ನೂ ಕೇಳ್ತೀಯಲ್ಲಾ" ಎಂದು ಗದರಿಕೊಂಡಳು.

ಆನಂದನಿಗೆ ಇದರಿಂದ ಅಪಮಾನವಾದಂತಾಯಿತು. ತನ್ನನ್ನು ಬಕಾ ಸುರನಿಗೆ ಹೋಲಿಸಿದಂತಾಯಿತಲ್ಲಾ— ತನ್ನ ತಮ್ಮನನ್ನೇ ಬಕಾಸುರನೆನ್ನು ವಳಲ್ಲಾ ಲಲಿತ. ಅವಳಿಗೆ ಎಂತಹ ಕೆಟ್ಟ ಮನಸ್ಸಿರಬೇಕು. ಅವಳಿಗೆ ತನ್ನ ಮೇಲೆ ಕೊಂಚವಾದರೂ ಪ್ರೀತಿ ವಿಶ್ವಾಸವಿದೆಯೇ? ಅವಳೂ ಉಳಿದವ ರಂತೆಯೇ ಎಂದು ತೀರ್ಮಾನಕ್ಕೆ ಬಂದಿದ್ದ. ಇಂತಹುದೇ ನೂರು ಸಣ್ಣ ಪುಟ್ಟ ಸಂಗತಿಗಳಿಗೆ ವಿಪರೀತಾರ್ಥ ಮಾಡಿ ಲಲಿತಳಿಗೆ ತನ್ನನ್ನು ಕಂಡರೆ ಪ್ರೇಮಕ್ಕೆ ಬದಲು ದ್ವೇಷ ತಾತ್ಸಾರಗಳವೆ ಎಂದು ನಂಬಿದ್ದ.

ಆನಂದ ಮನೆ ಬಿಟ್ಟವನು ಅವಸರವಸರವಾಗಿ ಕಾಲೇಜಿನ ಕಡೆಗ ನಡೆದ ಅವನು ಓದುತ್ತಿದ್ದುದು ಬಿ. ಎ. ಆನರ್ಸ ಎರಡನೆಯ ವರ್ಷ. ಮೊದಲನೆಯ ವರ್ಷ ಬಹಳ ಕಷ್ಟಪಟ್ಟು ಓದಿದ್ದರೂ ಪ್ರತಿಫಲ ಮಾತ್ರ ಸರಿಯಾಗಿ ಬಂದಿರಲಿಲ್ಲ. ಅದಕ್ಕೆ ಅವನೇ ಕಾರಣ. ಉಪಾಧ್ಯಾಯರನ್ನೆಲ್ಲಾ ತೆಗಳುವದು, ತರಗತಿಯಲ್ಲೇ ಜಗಳವಾಡಿ ಬಾಯಿಗೆ ಬಂದಂತೆ ಅನ್ನುವುದು ಅವನಿಗೆ ಸಾಮಾನ್ಯವಾಗಿ ಹೋಗಿತ್ತು. ಇದರಿಂದ ಉಪಾಧ್ಯಾಯರಿಗೆ ಅವನನ್ನು ಕಂಡರೆ ಆಗುತ್ತಿರಲಿಲ್ಲ. ಉಳಿದ ಸಹಪಾಠಿಗಳಿಗೆಲ್ಲಾ ತನಗಿಂತ ಹೆಚ್ಚು ಮನ್ನಣೆ ಸಿಕ್ಕಿದುದರಿಂದ ಆನಂದನಿಗೆ ಅವರ ವಿಚಾರವಾಗಿ ತಾತ್ಸಾರ,

ಅಸೂಯೆ! ಎಲ್ಲರನ್ನು ಕಡೆಗಣ್ಣಿನಿಂದ ನೋಡುತ್ತಿರುವ ಕಾರಣ ಅವನನ್ನು ದೂರದಲ್ಲಿರಿಸಿದ್ದರು. ಇವನೊಂದಿಗೆ ಯಾರೂ ಬೆರೆಯುತ್ತಿರಲಿಲ್ಲ. ಬೆನ್ನ ಹಿಂದೆ ಮಾತ್ರ ನೂರು ಮಾತನ್ನಾಡುತ್ತಿದ್ದರು.

ಆನಂದ ತರಗತಿಯೊಳಗೆ ಹೋಗುವ ವೇಳೆಗೆ ಉಪಾಧ್ಯಾಯರು ಪಾಠವನ್ನಾರಂಭಿಸಿದ್ದರು. ಆನಂದನ ಸಹಪಾಠಿಗಳು ಆರು ಜನ ಹುಡುಗರು, ಇಬ್ಬರು ಹುಡುಗಿಯರು. ಮೇಜಿನ ಸುತ್ತ ಹಾಕಿದ್ದ ಕುರ್ಚಿಗಳಲ್ಲಿ ಎಲ್ಲರೂ ಕುಳಿತಿದ್ದರು. ಇಂದು ಆನಂದನಿಗೆ ಖಾಲಿಯಿದ್ದ ಕುರ್ಚಿ ಹೆಂಗಸರ ಪಕ್ಕದಲ್ಲಿ! ಮರುಮಾತಿಲ್ಲದೆ ಅಲ್ಲಿ ಹೋಗಿ ಆ ಕುರ್ಚಿಯನ್ನೆಳೆದುಕೊಂಡು ಆ ಪಕ್ಕಕ್ಕೆ ಹಾಕಿಕೊಂಡು ಕುಳಿತ. ಅವನ ಸಹಪಾಠಿಗಳೆಲ್ಲ ಜೋರಾಗಿ ನಕ್ಕರು. ಉಪಾಧ್ಯಾಯರು ಅವನ ಕಡೆಗೆ ತಿರುಗಿ ನಗುತ್ತಾ "ಅಲ್ಲಿಯೇ ಕುಳಿತಿದ್ದ ರೇನಾಗುತ್ತಿತ್ತು, ಆನಂದ್? ಹೆಂಗಸರೆಂದರೆ ಯಾತಕ್ಕೆ ಇಷ್ಟೊಂದು ತಾತ್ಸಾರ? ಅವರಿಗೆ ಅವಮಾನ ಮಾಡಿದಂತಲ್ಲವೇ—ಅವರೂ ನಮ್ಮಂತೆಯೇ ಅಲ್ಲವೇ?—ಅವರಿಗೂ ಗೌರವ ಕೊಡಬೇಕು" ಎಂದರು

ಆನಂದ ಬೆಳಗ್ಗೆಯಿಂದ ಹಸಿದಿದ್ದ. ತಲೆ ಕಾದಿತ್ತು. ಉಪಾಧ್ಯಾಯರ ಈ ಮಾತಿನಿಂದ ಮೈ ಬೆಂಕಿಯಾಯಿತು. ಸಹಪಾಠಿಗಳ ನಗೆ ಅವನ ಅಭಿಮಾನವನ್ನು ಕೆಣಕಿತ್ತು. ಎದೆಯ ಜ್ವಾಲಾಮುಖಿಯಿಂದ ಒಮ್ಮೆಲೆ ಬೆಂಕಿಯನ್ನುಗುಳಿದ.

"ಗೌರವ! ಗೌರವ ಕೊಡಬೇಕೋ ಹೆಂಗಸರಿಗೆ!—ಅದೂ ಕಾಲೇಜು ಹುಡುಗಿಯರಿಗೆ—ಗೌರವದ ನೆರಳು ಕೂಡ ಸೋಕಲಾರದು—ಇವರನ್ನು! ಇಂತಹ ಮಾನಗೆಟ್ಟವರು! ವಾರಾಂಗನೆಯರನ್ನು ಮೀರಿಸುವ ಕಾಲೇಜು ಕುಮಾರಿಗಳಿಗೆ ಗೌರವ ಬೇರೆ ಕೇಡು!"

ತರಗತಿಯಲ್ಲೆಲ್ಲ ಸ್ತಬ್ಧವಾಗಿತ್ತು. ಎಲ್ಲರ ಮುಖವೂ ಕಪ್ಪಿಟ್ಟಿತು ಉಪಾಧ್ಯಾಯರಿಗೆ ಆನಂದನ ಮೇಲೆ ವಿಪರೀತ ಕೋಪ ಬಂದಿತು. ಆದರೆ ಅವರದೇ ತಪ್ಪು! ಹಾವನ್ನು ಕೆಣಕಿದುದೇ ತಾವು. ತಮ್ಮಿಂದ ಅನ್ಯಾಯವಾಗಿ ಆ ಹೆಣ್ಣುಮಕ್ಕಳ ಮನಸ್ಸಿಗೆ ನೋವಾಯಿತಲ್ಲಾ ಎಂದು ನೊಂದುಕೊಂಡರು. ಆದರೆ ಇದ್ದುದು ಮುಚ್ಚಿಟ್ಟಿಯಾಗಿತ್ತು. ಕೈ ಕಪ್ಪಾಗಿಕೂಡ

ದೆಂದರೆ ಸಾಧ್ಯವೇ ? ಆನಂದನ ಮನಸ್ಸು ಪಾಠದ ಮೇಲಿರಲಿಲ್ಲ. ಮನಸ್ಸಿನಲ್ಲಿ ಮಹಾ ತಳಮಳ—ಬಿರುಗಾಳಿಯ ಸೆರಗಿನಲ್ಲಿ ಸಿಕ್ಕಿದ ತರಗೆಲೆಯಂತೆ ಒದ್ದಾಡುತ್ತಿದ್ದ. ಒಮ್ಮೊಮ್ಮೆ ಪಶ್ಚಾತ್ತಾಪ. ನಾನು ಹಾಗೆನ್ನ ಕೂಡದಾಗಿತ್ತು. ಪಾಪ ಅವರೆಷ್ಟು ನೊಂದುಕೊಂಡರೋ ಏನೋ. ಎಂತಹ ಕ್ರೂರ ಮನಸ್ಸು ನನ್ನದು ಎಂದುಕೊಳ್ಳುತ್ತಿದ್ದ. ಮರುನಿಮಿಷ ಈ ಯೋಚನೆಯು ಉರುವು ಕೂಡ ಮನಸ್ಸಿನಲ್ಲಿ ಉಳಿಯುತ್ತಿರಲಿಲ್ಲ. ನಾನೆಂದುದೇ ಸರಿ ಅದರಲ್ಲಿ ತಪ್ಪೇನಿದೆ ?—ಅವರಿರುವುದೇ ಹಾಗೆ. ಅದಕ್ಕೇ ನಾನು ಹಾಗೆ ಹೇಳಿದುದು, ಎಂದುಕೊಳ್ಳುತ್ತಿದ್ದ ಮತ್ತೊಮ್ಮೆ. ಹೀಗೆಯೇ ಮನಸ್ಸಿನಲ್ಲಿ ಸಂಗ್ರಾಮ ಬಿರುಸಾಗಿಯೇ ಸಾಗಿತ್ತು. ಅಲ್ಲೋಲ ಕಲ್ಲೋಲ ! ಕಲ್ಲುಗಳೆರಡರ ನಡುವೆ ಸಿಕ್ಕಿದ ಹಸುರೆಲೆಯಂತೆ ನಸುಕಿ ಹೋಗುತ್ತಿದ್ದ. ಈ ಸ್ಥಿತಿಯಲ್ಲಿ ಯಾವುದೂ ಅವನ ಕಣ್ಣಿಗೆ ಕಾಣುತ್ತಿದ್ದಿಲ್ಲ. ಯಾವುದೂ ಮನಸ್ಸಿಗೆ ತಿಳಿಯುತ್ತಿರಲಿಲ್ಲ ಪುಸ್ತಕ ತೆರೆದಂತೆ ತೆರೆದಿತ್ತು. ಕಣ್ಣುಗಳೂ ತೆರೆದಿದ್ದವು. ಉಪಾಧ್ಯಾಯರು ಯಾವುದನ್ನೂ ಲಕ್ಷಿಸದೆ ತಮ್ಮಷ್ಟಕ್ಕೆ ತಾವು ಪಾಠಮಾಡಿಕೊಂಡು ಹೋಗುತ್ತಿದ್ದರು.

ಗಂಟೆ ಹೊಡೆದಾಗಲೇ ಆನಂದನಿಗೆ ಎಚ್ಚರ. ಉಪಾಧ್ಯಾಯರು ಹೆಚ್ಚು ಮಾತನಾಡದೆ ಹೊರಟುಹೋದರು. ಆನಂದನಿಗೆ ಏನೋ ಸಂಕಟ. ಇದ್ದಕ್ಕಿದ್ದಂತೆ ಯಾವುದೋ ಭಾರವಾದ ವಸ್ತುವನ್ನು ತಲೆಯಮೇಲಿಳುಕಿದಂತೆ ತಲೆ ತಿರುಗುತ್ತಿತ್ತು. ಎಲ್ಲವೂ ಮಸಕುಮಸಕು. ಗಾಳಿಯಲೆಗಳಲ್ಲಿ ತೂರುತ್ತಾ ಅಸ್ಪಷ್ಟವಾಗಿ ಕೆಲವು ಮಾತುಗಳು ಅವನ ಕಿವಿಗೆ ಬಿದ್ದುವು.

"ಅವನು ಯಾವಾಗಲೂ ಹಾಗೆಯೇ ಕಣೆ. ವಕ್ರ ಬುದ್ಧಿ ! ನಾವು ಅವನನ್ನು ಲೆಕ್ಕಕ್ಕೇ ತರದಿದ್ದರೆ ಸರಿ !"

"ಅಲ್ಲ ಕಣೇ. ಅವನು ಹಾಗೆಲ್ಲಾ ಕೆಟ್ಟಕೆಟ್ಟ ಮಾತು ಬೈಯುತ್ತಿದ್ದರೆ ಸುಮ್ಮನೆ ಕೇಳಿಕೊಂಡು ಕೂತಿರಬೇಕೇನೇ ?"

"ಅಯ್ಯೋ ಹುಚ್ಚಿ ! ಇಂತಹುದೆಷ್ಟು ಸಾರಿ ಆಗಿದೆ ಗೊತ್ತೆ ? ಹೋದ ವರುಷ ಒಂದು ಸಾರಿ ಪಾಠ ಆಗುತ್ತಿದ್ದಾಗ ಹೀಗಿಂದ ಹಾಗೆ ತಿರುಗುವಾಗ ಒಂದು ಸಾರಿ ಅವನ ಕಡೆ ನೋಡಿಬಿಟ್ಟೆ. ಅಷ್ಟಕ್ಕೇ ಅವನು ನನ್ನ ಕಡೆ ತೀಕ್ಷ್ಣವಾಗಿ ನೋಡಿದ. ಅಬ್ಬಾ ! ಆ ತೀಕ್ಷ್ಣದೃಷ್ಟಿಯನ್ನು ನೆನೆಸಿಕೊಂಡರೆ

ಈಗಲೂ ನನಗೆ ಮೈ ನಡುಕಬರುತ್ತೆ. ಒಂದೇ ಸಾರಿ ನಿನ್ನನ್ನು ನೋಡಿ ನಿನ್ನೊಳಯೋಚನೆಗಳನ್ನೆಲ್ಲಾ ಬೆಳಗಿ ಭಸ್ಮ ಮಾಡುತ್ತೆ. ಆ ತೀಕ್ಷ್ಣನೋಟ, ನಮ್ಮ ಹೃದಯದ ಗುಟ್ಟೆಲ್ಲಾ ರಟ್ಟು ಮಾಡುವಂತೆ ಕಾಣುತ್ತೆ ಆ ತೀವ್ರ ಪ್ರಕಾಶ. ಬಹಳ Imagination ( ಕಲ್ಪನಾಶಕ್ತಿ ) ಇದ್ದವರಿಗೆ ಮಾತ್ರವೇ ಅಂತೆ ಅದು.

" ಹೋಗೇ ಹೋಗೇ—Imagination ಅಂತೆ, ಮಣ್ಣು ! " ಆನಂದ ಸಿಗೆ ಆಗ ನೆನಪಿಗೆ ಬಂತು. ಉಪಾಧ್ಯಾಯರೊಬ್ಬರು ಪಾಠ ಹೇಳುತ್ತಿದ್ದಾಗ ಬೇಸರ ತಡೆಯಲಾರದೆ ಹುಡುಗರು ಒಬ್ಬರನ್ನೊಬ್ಬರು ಮಾತನಾಡಿಸಲು ಯತ್ನಿಸುತ್ತಿದ್ದರು. ಆಗ ಆಕಸ್ಮಾತ್ತಾಗಿ ಅವಳ ದೃಷ್ಟಿ ತನ್ನ ಮೇಲೆ ಬಿದ್ದಿತ್ತು. ಅದಕ್ಕೇ ತಾನು ಅವಳನ್ನು ಕ್ರೂರವಾಗಿ ದೃಷ್ಟಿಸಿದ್ದ.

" ಪಾಪ ! ಎಷ್ಟು ನೊಂದುಕೊಂಡಿರಬೇಕು ಅವಳು. ನಾನು ಹಾಗೆ ಬಿರುಗಣ್ಣಿನಿಂದ ನೋಡಬಾರದಾಗಿತ್ತು. ಅವಳು ಆಕಸ್ಮಿಕವಾಗಿ ನನ್ನ ಕಡೆಗೆ ನೋಡಿದುದೇ ತಪ್ಪೇ ? " ಎಂದುಕೊಂಡ.

" ನಾನು ಮಾಡಿದುದೇ ಸರಿ. ಪಾಠ ಕೇಳುವುದು ಬಿಟ್ಟು ನನ್ನ ಕಡೆಗೆ ನೋಡಿದುದು ಅವಳದೇ ತಪ್ಪು " ಎಂದಿತು ಮತ್ತೊಂದು ಮನಸ್ಸು ಮರು ನಿಮಿಷವೇ.

" ನಾನು ಆಕೆಯ ಕಡೆ ನೋಡುತ್ತಿದ್ದುದರಿಂದ ತಾನೇ ಅವಳು ನೋಡು ತ್ತಿದ್ದುದು ನನಗೆ ತಿಳಿದುದು. ನನ್ನದೂ ತಪ್ಪಲ್ಲವೇ ! "

ಇದೇ ಚಿಂತೆಯಲ್ಲಿ ತಾಕಲಾಡುತ್ತಾ ಎದ್ದು ಹೊರಟ. ಹೊರಗೆ ಕಾಲಿಡು ತ್ತಿದ್ದಂತೆಯೇ ಯಾರದೋ ಕೈ ತಗಲಿತು. ತಕ್ಷಣ ಕತ್ತೆತ್ತಿ ನೋಡಿದ. ಪಾಪ ಆಕೆ ಆ ರುದ್ರದೃಷ್ಟಿಯ ಶಕ್ತಿ ತಡೆಯಲಾರದೆ ತಲೆ ತಗ್ಗಿಸಿ ಮುಂದೆ ಹೊರಟು ಹೋದಳು.

" ಅವಳು ಬೇಕೆಂದೇ ಹಾಗೆ ಮಾಡಿದಳು. ಆ ಕಡೆಗೆ ಹೋಗಬಾರದಾಗು ತ್ತಿರಲಿಲ್ಲವೇನು ? ಊಹುಂ ! ಗಂಡಸರಿಗೆ ಮೈಕೈ ತಾಗಿಸುವ ಆಸೆ ಅವರಿಗೆ ಬೇಕಲ್ಲ. ತ್ಸು ! ಹೀನ ಪಶುಗಳು ! " ಎಂದುಕೊಂಡ.

"ಛೆ! ಪಾಪ! ಕಾಣದೆ ಕೈ ತಗುಲಿತು ಅವಸರದಲ್ಲಿ ಆ ಕಡೆಯಿಂದ ಬಂದಳು. ನಾನು ಕಾಣದೆ ಮುಂದೆ ಹೆಜ್ಜೆಯಿಟ್ಟೆ. ಆದುದರಿಂದ ಹಾಗಾಗಿರ ಬೇಕು." ಎನಿಸಿತು ಮತ್ತೆ.

ನನ್ನ ಭಾವನೆ ತಪ್ಪು. ಹೆಂಗಸರೆಲ್ಲರೂ ಅಷ್ಟೊಂದು ಕೆಟ್ಟವರಲ್ಲವೆಂದು ಮನಸ್ಸು ಕೊರೆಯುತ್ತಿತ್ತು. ಎಷ್ಟೆಷ್ಟು ತಪ್ಪಿಸಿಕೊಳ್ಳಲು ಯತ್ನಿಸಿದರೂ ಆ ಚಕ್ರತೀರ್ಥದಿಂದ ಹೊರಬೀಳಲಾಗಲಿಲ್ಲ ತರಗತಿಗೆ ಮತ್ತೆ ಹೋಗುವುದು ಸಾಧ್ಯವಾಗದೆ ಮನೆಯ ಕಡೆಗೆ ಹೊರಟ.

ದಾರಿಯಲ್ಲಿ ಯಾರೋ ಗುರುತಿನವರು ಸಿಕ್ಕಿ ನಮಸ್ಕರಿಸಿದರು. ಆನಂದನೂ ಅವರಿಗೆ ನಮಸ್ಕರಿಸಲು ತಲೆಯೆತ್ತಿದ.

ಗ್ರೀಷ್ಮಋತು ಕಳೆದು ವರ್ಷಋತು ಹೆಜ್ಜೆಯಿಡುತ್ತಿತ್ತು ಚಾಮುಂಡಿ ಬೆಟ್ಟದ ಮೇಲಿನ ತಿಳಿಮೋಡಗಳ ಮುಸುಕು ಗಾಳಿಯಲ್ಲಿ ಸೆಲ್ಲನೆ ಅಲುಗಾಡುತ್ತಿತ್ತು ಮನೆಗಳಿಂದ ಹೊರಡುತ್ತಿದ್ದ ಹೊಗೆ ಸಣ್ಣ ಸಣ್ಣ ಮೋಡಗಳ ದಿಬ್ಬಣವಾಗಿ ಸಾಗುತ್ತಿತ್ತು ಎಲ್ಲೋ ಅಲ್ಲೊಂದು ಇಲ್ಲೊಂದು ಹಕ್ಕಿ ಸದ್ದು ಮಾಡುತ್ತಿತ್ತು. ನೀಲಾಕಾಶದ ಕಾಡಿಗೆಯ ಮೋಡಗಳ ಹಿನ್ನೆಲೆಗೆ ಒಂದೇ ಒಂದು ಬಿಳಿಯ ಹಕ್ಕಿ ಬೆಟ್ಟದ ಕಡೆಗೆ ಹಾರಿ ಹೋಗುತ್ತಿತ್ತು. ಆನಂದನ ಎದೆ ಕಲಕಿದಂತಾಯಿತು ಅವ್ಯಕ್ತ ಚಿಂತೆ ಮೂಡಿ ಹೆಚ್ಚಾಗುತ್ತಾ ಬಂತು..

"ನಮ್ಮ ಮನಸ್ಸೂ ಆ ಹಕ್ಕಿಯಂತೆಯೇ. ಹೊಸ ಹೊಸ ಜಾಗಗಳಿಗಾಗಿ ಹಾತೊರೆಯುತ್ತದೆ. ಕಲ್ಪನೆಯಲ್ಲಿ ಹಾರುತ್ತದೆ ಅದರ ಆಸೆಗಳಿಗೆ ಕೊನೆ ಮೊದಲೇ ಇಲ್ಲ ಸಿಗರೇಟಿನ ಹೊಗೆಯೆದ್ದು ಆಕಾಶವನ್ನೆ ಆಕ್ರಮಿಸಲು ಯತ್ನಿಸುವಂತೆ ನಮ್ಮೆಲ್ಲರ ಆಸೆಗಳು ಆದರೆ ಎರಡು ಪಟಗಳು ಜಂಟಿಬಿದ್ದು ಎರಡೂ ಚೂರಾಗುವಂತೆ ಮನುಷ್ಯನ ಆಸೆ ಆಕಾಂಕ್ಷೆಗಳು!" ಆನಂದ ಇದೇ ರೀತಿಯಲ್ಲಿ ಯೋಚಿಸುತ್ತಾ ಮುನ್ನಡೆದ. ಮನೆಯಲ್ಲಿ ಲಲಿತ ಅವನಿಗಾಗಿ ಕಾದಿದ್ದಳು ತಮ್ಮ ಹಸಿದಿರುವನಲ್ಲಾ ಎಂದು ಅವಳೂ ಊಟ ಮಾಡಿರಲಿಲ್ಲ.

ಊಟಮಾಡಿ ನಿದ್ರೆ ಹೋಗಲು ಯತ್ನಿಸಿದ. ಆದರೆ ನಿದ್ರೆ ಬರಲಿಲ್ಲ. ಮನಸ್ಸಿನ ಚಿಂತೆಗೆ ಹೆಚ್ಚು ಅನುವಾದಂತಾಯಿತು. ಹಾಗೂ ಹೀಗೂ ಒದ್ದಾಡುತ್ತಿದ್ದು ಸಂಜೆ ವಿಶ್ವವಿದ್ಯಾನಿಲಯದ ಸಂಘದ ಕಡೆಗೆ ನಡೆದ. ಅಂದು ಚುನಾವಣೆ ಬೇರೆ. ಆನಂದನ ಸಹಪಾಠಿ ಕಾರ್ಯದರ್ಶಿಯ ಸ್ಥಾನಕ್ಕೆ ನಿಂತಿದ್ದ. ಅವನಿಗೆ ತನ್ನ ವೋಟು ಕೊಡುವುದಾಗಿ ಆನಂದ ಮಾತು ಕೊಟ್ಟಿದ್ದ. ಆದುದರಿಂದ ಚುನಾವಣೆಗೆ ಅವನು ಹೋಗಲೇಬೇಕಾಗಿತ್ತು.

೩

ಚುನಾವಣೆಯ ಸ್ಥಳದ ಒತ್ತಡದಿಂದ ಬೇಸತ್ತ ಆನಂದ ಕೊಂಚ ಗಾಳಿ ಕುಡಿದು ಬರಲೆಂದು ಕಾರಂಜಿ ಕೆರೆಯ ಕಡೆಗೆ ಹೊರಟ. ದಾರಿಯಲ್ಲಿ ಅವನ ಹಳೆಯ ದಿನಗಳ ಗೆಳೆಯ ರಾಮು ಸಿಕ್ಕಿದ. ರಾಮುವೂ ಆನಂದನೂ ಮಾಧ್ಯಮಿಕ ಶಾಲೆಯಿಂದ ಕಾಲೇಜಿನ ವರೆಗೂ ಒಟ್ಟಿಗೆ ಓದಿದವರು. ಚಿಕ್ಕಂದಿನಿಂದಲೂ ಒಬ್ಬರಿಗೊಬ್ಬರು ಬಹಳ ಅನ್ಯೋನ್ಯವಾಗಿದ್ದರು. ಉಳಿದ ಹುಡುಗರೆಲ್ಲಾ ಆನಂದನನ್ನು ಕುಂಟನೆಂದು ಹಾಸ್ಯ ಮಾಡುತ್ತಿದ್ದಾಗ ರಾಮು ಅವನ ಪರವಾಗಿ ಅವರೊಡನೆ ಜಗಳವಾಡುತ್ತಿದ್ದ. ಎಷ್ಟೋ ಬಾರಿ ಅವರಿಂದ ಅವನಿಗೆ ಏಟು ಬಿದ್ದಿತ್ತು. ಇದರಿಂದ ಆನಂದನಿಗೆ ರಾಮುವಿನ ವಿಷಯದಲ್ಲಿ ಸ್ವಲ್ಪ ಗೌರವವಿತ್ತು. ರಾಮುವನ್ನು ಇಂದು ಅನಿರೀಕ್ಷಿತವಾಗಿ ಕಂಡು ಅವನಿಗೆ ಬಹಳ ಸಂತೋಷವಾಗಿತ್ತು.

"ಏನಯ್ಯ ಆನಂದ, ಹೇಗಿದ್ದೀ ?"

"ಓಹ್, ರಾಮುವೇನು ? ಏನೋ ರಾಮು, ಯಾವಾಗ ಬಂದೆಯೋ? ' ಎಂದು ಆನಂದ ಅವನ ಕಡೆ ತಿರುಗಿದ.

"ಈವತ್ತು ಬೆಳಿಗ್ಗೆ ಬಂದೆ. ನಿನ್ನ ಅಕ್ಕ, ಅಮ್ಮ, ಮಕ್ಕಳೆಲ್ಲಾ ಸೌಖ್ಯ ತಾನೇ ?"

"ಹುಂ, ಎಲ್ಲಿಳಿದಿದ್ದೀ ?"

"ನಮ್ಮ ಚಿಕ್ಕಮ್ಮನ ಮನೆಯಲ್ಲಿ. ನಮ್ಮ ಚಿಕ್ಕಪ್ಪ ಹೋಗಿಬಿಟ್ಟರು. ಅದಕ್ಕೋಸ್ಕರ ಇನ್ನೂ ಕೆಲವು ದಿನ ಇಲ್ಲೇ ಇರಬೇಕು."

"ಹಾಗಾದರೆ ಮತ್ತೆ ಯಾವಾಗ ಸಿಕ್ಕುತ್ತೀ ?"

"ನಾಳೆಯ ಸಂಜೆ ಮನೆಗೆ ಬರ್ತೀನಿ. ಲಲಿತಮ್ಮನನ್ನು ನೋಡಿ ಬಹಳ ದಿನವಾಯಿತು."

"ಹುಂ—ಮರೆತೀಯೆ ?"

"ಇಲ್ಲಪ್ಪೋ."

ರಾಮು ಹೊರಟು ಹೋದ. ಆನಂದನ ಮನಸು ಕೊಂಚ ಹಗುರ ವಾಗಿತ್ತು ! ಆನಂದನ ದುಃಖೀಜೀವನಕ್ಕೆ ರಾಮು ಆಸರೆಯಾಗಿ ಸಿಕ್ಕಿದ. ಅವನು ಏನೇನು ಹೇಳಿದರೂ ಸಮಾಧಾನದಿಂದ ಕೇಳುತ್ತಿದ್ದ. ಆನಂದನ ವಿಚಾರಗಳಿಗೂ ತನ್ನ ವಿಚಾರಗಳಿಗೂ ಸ್ವಲ್ಪವೂ ಸಾಮರಸ್ಯವಿಲ್ಲವೆಂಬುದು ಒಂದೆರಡು ಬಾರಿಯ ಮಾತುಕತೆಯಿಂದಲೇ ರಾಮುವಿಗೆ ಮನವರಿಕೆಯಾ ಯಿತು. ಅವರಿಬ್ಬರ ವಿಚಾರಗಳಿಗೂ ಹೊಂದಿಕೆಯೇ ಆಗುತ್ತಿರಲಿಲ್ಲ. ರಾಮು ಆಶಾವಾದಿ. ಆನಂದ ಅದಕ್ಕೆ ವಿಪರೀತ. ಜೀವನದಲ್ಲಿ ಮುಂದೆ ಸುಖ ಬರ ಲಿದೆಯೆಂಬ ನಂಬಿಕೆ ಆನಂದನಲ್ಲಿ ಕೊಂಚವೂ ಇರಲಿಲ್ಲ. ರಾಮು ಇದನ್ನು ತಿಳಿದು, ಹೇಗಾದರೂ ಮಾಡಿ ಆನಂದನ ನಿರಾಶಾವಾದ ಹೋಗಲಾಡಿಸ ಬೇಕೆಂದು ತೀರ್ಮಾನಿಸಿದ. ಅವನ ಮಾತನ್ನೆಲ್ಲಾ ಕೇಳಿಯಾದಮೇಲೆ ತನ್ನ ಮಾತುಗಳನ್ನು, ತನ್ನ ತತ್ವವನ್ನು ವಿಚಕ್ಷಣೆಯಿಂದ ಪ್ರತಿಪಾದಿಸುತ್ತಿದ್ದ.

"ನೀನು ಹೇಳಿದುದೆಲ್ಲ ನಿಜ. ಮನುಷ್ಯನಿಗೆ ದುಃಖ ಬಹಳ. ದುರಾ ಸೆಯೂ ವಿಪರೀತ. ಆದರೆ ಅದಕ್ಕಾಗಿ ಮನುಷ್ಯನನ್ನೇ ದ್ವೇಷಿಸುವದು ಸರಿಯೇ? ಎಲ್ಲರೂ ತಪ್ಪು ಮಾಡುತ್ತಾರೆ. ಆದರೆ ತಪ್ಪನ್ನು ಒಪ್ಪಮಾಡಿ ಸರಿಗೊಳಿಸು ವವರು ಯಾರು ? ಎಲ್ಲರಂತೆಯೇ ನಾವೂ ತಲೆಯ ಮೇಲೆ ಕೈಯಿಟ್ಟು ಕಣ್ಣೀರು ಸುರಿಸುತ್ತಾ ಕುಳಿತರೆ ಸಾಗೀತೇ ? ಕಲಿತವರಾದ ನಾವೇ ಕುಳಿತು ಅಳಲಾದೀತೇನೋ ?"

"ಆದರೆ—ಆದರೆ— ತೊಂದರೆಗಳು—" ಆನಂದನ ಸಂದೇಹ.

"ತೊಡಕಿದೆ ಆನಂದ. ನಿಜವಾಗಿ ನಮ್ಮ ಹಾದಿಯಲ್ಲಿ ತೊಡಕುಗಳು ವಿಪರೀತ. ಆದರೆ ಆ ತೊಡಕುಗಳನ್ನು ಎದುರಿಸುವುದರಲ್ಲೇ ಒಂದು ಆನಂದ, ಒಂದು ಸುಖ. ಹಕ್ಕಿ ಎದುರುಗಾಳಿಯಲ್ಲಿ ಹಾರುವುದಲ್ಲಾ—ರೆಕ್ಕೆಯ ಬಡಿತ ಜೋರಾದರೂ, ಆ ಗಾಳಿಯನ್ನೆದುರಿಸಿ ಜಯಿಸಿದ ಸುಖ ಹೆಚ್ಚು."

ಆನಂದನ ಮನಸಿನ ಮೇಲೆ ರಾಮುವಿನ ಮಾತುಗಳ ಪರಿಣಾಮ ಬಹಳ. ಹಳೆಯ ವಿಚಾರಗಳು ಮಾಯವಾಗಿ ಹೊಸ ವಿಚಾರಗಳ ಮನಸ್ಸಿಗೆ ಬರಲು

ಹವಣಿಸುತ್ತಿದ್ದಾಗಲೇ ರಾಮು ಹೊಸತಿಗೆ ಬೆಂಬಲವಾಗಿ ಬಂದ. ಆದರೆ ಆ ಕಾರ್ಯ ನಡೆಯುವಾಗಿನ ಮನಸ್ಸಿನ ಸ್ಥಿತಿ ಮಾತ್ರ—ಬಿರುಗಾಳಿಯ ಸೆರಗಿನಲ್ಲಿ ಸಿಕ್ಕಿದ ಒಂದು ಕಾಗದದ ಚೂರಿನಂತೆ!

ರಾಮು ಅವನ ಹೊಸ ವಿಚಾರಗಳಿಗೆಲ್ಲಾ ಒತ್ತಾಸೆ ನೀಡುತ್ತಿದ್ದ. ಸಮಯ ನೋಡಿಕೊಂಡಿದ್ದು ಹಳೆಯ ಅಭಿಪ್ರಾಯಗಳಿಗೆ ಕೊಡಲಿಪೆಟ್ಟು ಕೊಡುತ್ತಿದ್ದ. ಮೊದಲೇ ಆನಂದನ ಮನಸ್ಸು ಹೊಯ್ದಾಡುತ್ತಿತ್ತು. ಸಹಜವಾಗಿಯೇ ಸುಳಿದ ಸಂದೇಹದ ಬಿಸಿಯಲ್ಲಿ ನಿರಾಶಾವಾದ ಕೊಂಚ ಕೊಂಚವಾಗಿ ಕುಸಿಯುತ್ತಿತ್ತು. ಅದರ ಜತೆಗೆ ರಾಮುವಿನ ಮಾತುಗಳು, ವಿಚಾರಗಳು ಕೂಡಿಕೊಂಡುದರಿಂದ ಘರ್ಷಣೆ ಬಲವಾಯಿತು. ಯಾರಲ್ಲಿಯೂ ವಿಶ್ವಾಸವಾಗಲೀ ನಂಬುಗೆಯಾಗಲೀ ಇಲ್ಲದ ಆನಂದನಿಗೆ ರಾಮುವಿನಲ್ಲಿ ಬಹಳ ಅನ್ಯೋನ್ಯತೆ ಬೆಳೆದು ಬಂದಿತ್ತು. ಅವನಿಂದ ಯಾವುದನ್ನೂ ಮರೆಮಾಚುತ್ತಿರಲಿಲ್ಲ. ತನ್ನ ಮನಸ್ಸಿನ ಸ್ಥಿತಿಗತಿ, ಆಗುಹೋಗುಗಳನ್ನೆಲ್ಲಾ ತಿಳಿಸಿಬಿಡುತ್ತಿದ್ದ. ಇದರಿಂದ ರಾಮುವಿಗೂ ಅನುಕೂಲವಾಗಿತ್ತು. ಆನಂದನ ಮನಸ್ಸಿನ ಸ್ಥಿತಿಯೇನೆಂಬುದನ್ನು ಅಳೆಯಲು ಅವನಿಗೆ ಇದರಿಂದ ಅನುವಾಯಿತು. ಅವನನ್ನು ತಿದ್ದಲು ಸಹಕಾರಿಯಾಯಿತು.

ಪ್ರತಿದಿನವೂ ಸಂಜೆ ಆನಂದ ರಾಮುವಿಗಾಗಿ ಕಾದಿರುತ್ತಿದ್ದ. ತಾನು ಹೇಳಿದುದನ್ನೆಲ್ಲಾ ಅವನು ವಿರೋಧಿಸುವನಲ್ಲಾ—ಅವನೊಂದಿಗೆ ಹೋಗಬಾರದೆಂದುಕೊಂಡಿರುತ್ತಿದ್ದ. ಆದರೆ ರಾಮು ಬಂದೊಡನೆಯೇ ಅದೆಲ್ಲಾ ಮರೆತು ಸಂತೋಷದಿಂದ ಅವನ ಜೊತೆಗೆ ಹೊರಡುತ್ತಿದ್ದ. ಒಂದೊಂದು ದಿನವಂತೂ ರಾಮುವಿಗಾಗಿ ಕಾದು ಕಾದು ಕಾತರಪಡುತ್ತಿದ್ದ. ಅವನು ಬರುವುದು ಕೊಂಚ ತಡವಾದರೆ ಕಿಟಕಿಯಿಂದ ಹೊರಗಿಣಿಕಿ, ನೂರು ಬಾರಿ ಬಾಗಿಲಿಗೆ ಬಂದು ದಾರಿಕಾಯುತ್ತಿದ್ದ. ಯಾವುದೋ ಅನಿರ್ವಚನೀಯ ಅಗಾಧ ಶಕ್ತಿ ಅವನನ್ನೂ ರಾಮುವನ್ನೂ ಒಂದುಗೂಡಿಸಿತ್ತು.

ಯಾವ ಬಗೆಯಲ್ಲಾದರೂ ಸರಿ ಆನಂದನಿಗೆ ಮಾನವತೆ ಕೊಟ್ಟರೆ ಸಾಕೆಂದು ರಾಮುವಿನ ಸಂಕಲ್ಪ. ಅವನ ಕವಿತೆಗಳು ಕತೆಗಳನ್ನೆಲ್ಲಾ ಓದಿದ. ಪ್ರತಿಯೊಂದರಲ್ಲೂ ಅವನಿಗೆ ಕಂಡುದು ಜೀವನದ ಕಹಿ, ಬಾಳ್ವೆಯ ನಿಷ್ಠುರತೆ, ಮನುಷ್ಯನ ನಿರ್ಮಾನುಷತೆ, ಕ್ರೌರ್ಯ, ದ್ವೇಷದ ಕಿಚ್ಚು, ಒಂದೊಂದು ಪದದಿಂದಲೂ ಇಣಿಕಿ ನೋಡುತ್ತಿತ್ತು. ಇದರಿಂದ ಆನಂದನನ್ನಿಳಿಸಿ,

ಸಾಮಾನ್ಯ ಜೀವಿಯನ್ನಾಗಿಸಿ, ಆಶಾವಾದಿಯನ್ನಾಗಿಸುವುದು ಹೇಗೆಂಬ.ದೇ ರಾಮುವಿನ ಸಮಸ್ಯೆ.

ಎಂದಿನಂತೆ ಇಬ್ಬರೂ ಜತೆಯಾಗಿ ಹೋಗುತ್ತಿದ್ದರು. ಆನಂದ ಮನಸ್ಸಿನಲ್ಲೇನನ್ನೊ ಗುಣಾಕಾರ ಹಾಕುತ್ತಿದ್ದವನು ಮಾತನಾಡದೆ ಹಾಗೆಯೇ ನಡೆಯುತ್ತಿದ್ದ. ರಾಮುವು ಅವನಾಗಿಯೇ ಮಾತನಾಡುವವರೆಗೂ ಕೆಣಕಬಾರದೆಂದು ಸುಮ್ಮನಿದ್ದ. ಆನಂದ ಕತ್ತೆತ್ತಿ ಆಕಾಶದ ಕಡೆ ನೋಡಿದ. ಮೋಡಗಳು ಮುಳುಗುತ್ತಿದ್ದ ಸಂಜೆಸೂರ್ಯನ ಕೆಂಗಿರಣಗಳಲ್ಲಿ ಬಣ್ಣಬಣ್ಣದ ಪತ್ತಲದಂತೆ ತೋರುತ್ತಿದ್ದವು. ಕಾರಂಜಿ ಕೆರೆಯಲ್ಲಿ ಅವುಗಳ ಪ್ರತಿಬಿಂಬ ಅಲೆಗಳ ತೊಟ್ಟಿಲಿನಲ್ಲಿ ತೂಗುತ್ತಿತ್ತು. ಆನಂದನ ಹೃದಯದಿಂದ ಒಂದು ನಿಟ್ಟುಸಿರು ಹೊರಳಿತು.

"ಏನೋ ಆನಂದ ?" ಎಂದ ರಾಮು.

"ಏನೂ ಇಲ್ಲ"

"ಏನೋ ಯೋಚಿಸುತ್ತಿದ್ದೀ—ಇಲ್ಲಾಂತ ಹೇಳುತ್ತೀ ಅಷ್ಟೆ."

"ಏನೂ ಇಲ್ಲ. ನಿನ್ನ ವಿಷಯವನ್ನೇ ಯೋಚಿಸುತ್ತಿದ್ದೆ. ನೀನು ನನಗೆ ಸಿಕ್ಕಿ ಇನ್ನೂ ಒಂದು ವಾರವಾಗಿರಬಹುದು, ಅಷ್ಟೇ. ನಿನ್ನ ವಿಚಾರಗಳಿಗೂ ನನ್ನ ವಿಚಾರಗಳಿಗೂ ಅಜಗಜಾಂತರ. ನಾನು ಹೇಳಿದುದಕ್ಕೆಲ್ಲಾ ನೀನು ವಿರುದ್ಧ. ಇಷ್ಟಾದರೂ ನಿನ್ನಲ್ಲಿ ನನಗೊಂದು ವಿಶ್ವಾಸ-ಅದೇಕೋ ಏನೋ—ನೀನು ಬರುವುದು ಕೊಂಚ ತಡವಾದರೆ ಮನಸು ತಹತಹ ಪಡುತ್ತದೆ. ನಿನ್ನನ್ನು ಕಂಡೊಡನೆ ಸಮಾಧಾನ! ಆದರೆ ನೀನು ಹೊರಟು ಹೋದಮೇಲೆ ಒಂದೊಂದು ಬಾರಿ ನಿನ್ನ ವಿಚಾರವಾಗಿ ಎಷ್ಟೊಂದು ದ್ವೇಷ ಉಕ್ಕುತ್ತದೆ ಗೊತ್ತೇ? ನೀನಾ ಸಮಯದಲ್ಲಿ ಸಿಕ್ಕಿದರೆ—"

ಆನಂದ ಮಾತು ಮುಗಿಸದೆ ಅಲ್ಲಿಗೇ ನಿಲ್ಲಿಸಿದ. ರಾಮು ಅವನ ಮಾತು ಕೇಳಿ ನಸು ನಗುತ್ತಿದ್ದ. ಆನಂದನ ದೃಷ್ಟಿ ಇದ್ದಕ್ಕಿದ್ದಂತೆ ದೂರದ ದಿಗಂತದ ಮೋಡದ ಕಡೆಗೆ ಹಾರಿಹೋಯಿತು.

"ರಾಮು, ಆ ಮೋಡ ನೋಡು—ಎಷ್ಟೊಂದು ಕರಾಳವಾಗಿದೆ. ಈಗಿನ್ನೂ ಬಣ್ಣಬಣ್ಣವಾಗಿ ಹೊಳೆಯುತ್ತಿದ್ದುದು ಈಗ ಭೀಕರವಾಗಿದೆ. ಜೀವನ ಕೂಡ ಹಾಗೆಯೇ ಅಲ್ಲವೇ, ರಾಮು?" ಎಂದ ಮೆಲ್ಲನೆ ಆನಂದ.

"ಹೌದು ಆನಂದ. ಈಗ ಕಪ್ಪಗಿದೆ. ಇನ್ನೊಂದೆರಡು ಗಳಿಗೆಯಲ್ಲೇ ಚಂದ್ರೋದಯವಾಗಿ ಮೋಡಕ್ಕೆ ಬೆಳ್ಳಿಯ ಡಾಬು ಸಿಗುವುದು" ಎಂದ ರಾಮು.

ಆನಂದ ಮರು ಮಾತಿಲ್ಲದೆ ಅವನೊಂದಿಗೆ ಮುನ್ನಡೆದ. ರಾಮುವಿನ ಮಾತಿನ ಫಲಿತಾಂಶ—ಮನಸಿನಲ್ಲಿ ಮತ್ತೆ ತಿಕ್ಕಾಟ—ಒಂದೊಂದು ಬಾರಿ ಚಿಂತಿಸಿ ಚಿಂತಿಸಿ ಉನ್ಮಾದ ಬಂದಂತಾಗುತ್ತಿತ್ತು. ಅಂದು ಕೂಡ ರಾಮು ಜತೆಗಿಲ್ಲದಿದ್ದರೆ ಎಷ್ಟು ಜನಕ್ಕೆ ಢಿಕ್ಕಿ ಹೊಡೆಯುತ್ತಿದ್ದನೋ—ಯಾವ ಅಪ ಘಾತಕ್ಕೀಡಾಗುತ್ತಿದ್ದನೋ!

* * * * *

ಆನಂದ ಊಟ ಮಾಡಲು ಕುಳಿತ. ಮನಸ್ಸಿನಲ್ಲೆಲ್ಲಾ ರಾಮುವಿನ ಮಾತಿನ ಪ್ರತಿಧ್ವನಿ. ಎಷ್ಟು ಚಿಂತಿಸಿದರೂ ಬಗೆಹರಿಯದ ಸಮಸ್ಯೆ. ಹಳೆಯದು ಹೊಸದರ ತಿಕ್ಕಾಟದಲ್ಲಿ ಅವನ ಪ್ರಜ್ಞೆಯೇ ಉಡುಗಿ ಹೋದಂತಾಗಿತ್ತು. ತಟ್ಟೆಗೆ ಅನ್ನ ಬಡಿಸಿದುದೂ ಅವನಿಗೆ ಅರಿವಿಲ್ಲ ಲಲಿತ ಅವನ ಮುಂದೆ ನಿಂತು ಅವನನ್ನೇ ದಿಟ್ಟಿಸಿ ನೋಡುತ್ತಿದ್ದುದೂ ಅವನಿಗೆ ತಿಳಿಯದು, ಕಣ್ತೆರೆದು ಯಾವುದೋ ಅವ್ಯಕ್ತದಲ್ಲಿ ದೃಷ್ಟಿಯಿಟ್ಟು ಕುಳಿತ ಅವನಿಗೆ ಉಳಿದವುಗಳ ನೆನಪೇ ಇಲ್ಲ

"ಇದೇಕೋ ಸುಮ್ಮನೆ ಹೀಗೆ ಕುಳಿತಿರುವನಲ್ಲಾ ಊಟ ಮಾಡಬಾರದೇ" ಎಂದುಕೊಂಡಳು ಲಲಿತ. ಅವನನ್ನೇ ಕೇಳೋಣವೆಂದರೆ ಹೆದರಿಕೆ ಮೌನವಾಗಿದ್ದರೂ ಸರಿ. ರೇಗಿ ಬಿದ್ದರೂ ಸರಿ ಕೇಳಲೋ ಬೇಡವೋ ಎಂದು ಒಂದು ನಿಮಿಷ ಹಿಂದೆಗೆದಳು. ಆದರೂ ಮನಸು ಸುಮ್ಮನಿರಬೇಕಲ್ಲಾ.

"ಇದೇಕೋ ಆನಂದ—ಊಟ ಮಾಡಬಾರದೇನೋ" ಎಂದಳು ಜೋರಾಗಿ. ಆನಂದ ಸುಮ್ಮನೆ ಕುಳಿತಿದ್ದ.

"ಆನಂದ, ಆನಂದ" ಎಂದು ಲಲಿತ ಗಾಬರಿಯಿಂದ ಕೂಗಿ ಅವನನ್ನು ಅಲುಗಿಸಿದಾಗ ಜೋಂಪಿನಿಂದ ಬಿಡುಗಡೆ ತಲೆಯನ್ನೊಂದು ಬಾರಿ ಕೊಡವಿಕೊಂಡು ಊಟ ಮಾಡಲಾರಂಭಿಸಿದ.

"ಏನು ಯೋಚನೆ ಮಾಡುತ್ತಿದ್ದೆಯೋ?"

"ಏನೂ ಇಲ್ಲಕ್ಕ" ಎಂದ ಆನಂದ ತಲೆ ಮೇಲೆತ್ತದೆಯೇ. ಲಲಿತಳಿಗೂ ಆನಂದನಲ್ಲೇನೋ ಬದಲಾವಣೆ ಕಂಡು ಬಂದಿತ್ತು. ಮೊದಲು ಯಾರಾದರೂ ತುಟಿ ಪಿಟಕ್ಕೆನ್ನುವದೇ ತಡ, ಅವರ ಮೇಲೆ ಎಗರಿ ಬೀಳುತ್ತಿದ್ದ. ಹಸಿದ ಹುಲಿಯಂತೆ ರೇಗುತ್ತಿದ್ದ. ಆದರೆ ಈಗ ಅಷ್ಟೊಂದು ಕೋಪವಿರಲಿಲ್ಲ. ಆದರೆ ಈ ಪರವಶತೆ ಮಾತ್ರ ಹೊಸತು. ಎಲ್ಲಿಯೋ ಮನಸು, ಏನೋ ಯೋಚನೆ. ಈಚೀಚೆಗಂತೂ ಅದು ವಿಪರೀತ ಹೆಚ್ಚಿ ಹೋಗಿತ್ತು. ಹಿಂದೆ ಅವನನ್ನು ಆ ರೀತಿ ಕೇಳುವುದಕ್ಕೇ ಹೆದರುತ್ತಿದ್ದಳು. ಧೈರ್ಯತಂದುಕೊಂಡು ಹಾಗೇನಾದರೂ ಪ್ರಶ್ನೆ ಮಾಡಿದ್ದರೆ ಉತ್ತರ ಗೊತ್ತೇ ಇತ್ತು—

"ನಿನಗೇನು ನಾನು ಯೋಚನೆಯನ್ನಾದರೂ ಮಾಡುತ್ತೇನೆ. ಏನಾದರೂ ಮಾಡುತ್ತೇನೆ. ಅದೆಲ್ಲ ಕಟ್ಟಿಕೊಂಡು ನಿನಗೇನು?" ಎನ್ನುತ್ತಿದ್ದ. ಆದರೆ ಇಂದಿನ ಉತ್ತರ ಹಾಗಿರಲಿಲ್ಲ. ಅದರಲ್ಲೇನೋ ಒಂದು ಸೌಜನ್ಯವಿತ್ತು.

ಲಲಿತಳಿಗೆ ಆನಂದನೊಬ್ಬನೇ ತಮ್ಮ. ಚಿಕ್ಕಂದಿನಿಂದಲೂ ತಂದೆಯ ಸುಖ ಕಾಣದೆ ಬೆಳೆದವರು. ತಾಯಿ ಪಾರ್ವತಮ್ಮನವರಂತೂ ಬಹು ಕಷ್ಟದಿಂದ ಇಬ್ಬರನ್ನೂ ಬೆಳೆಸಿ ದೊಡ್ಡವರನ್ನಾಗಿ ಮಾಡಿದರು. ಚಿಕ್ಕಂದಿನಿಂದಲೂ ಲಲಿತಳಿಗೆ ಒಂದು ಕ್ಷಣವಾದರೂ ಆನಂದನನ್ನು ಬಿಟ್ಟಿರಲಾಗುತ್ತಿರಲಿಲ್ಲ. ಒಂದು ನಿಮಿಷವಾದರೂ ಅವಳ ಕಂಕುಳಿನಿಂದ ಅವನು ಕೆಳಗಿಳಿಯುತ್ತಿರಲಿಲ್ಲ. ಆರೇಳು ವರ್ಷದವನಾಗುವ ವರೆಗೂ ಅವನನ್ನೆತ್ತಿಕೊಳ್ಳುತ್ತಿದ್ದಳು. ಅವನಿಗೆಷ್ಟು ಮುತ್ತಿಟ್ಟರೂ ಸಾಲದು. ಎಷ್ಟು ಆಟವಾಡಿಸಿದರೂ ಅವಳಿಗೆ ತೃಪ್ತಿಯೇ ಇಲ್ಲ. ಅವನಿಗೆ ನಿತ್ಯ ಮಡಿಯುಡಿಸಿ, ಬಟ್ಟೆಹಾಕಿ, ತಿಲಕವನಿಟ್ಟು ಕುಣಿಸಿ, ತಾನೂ ಕುಣಿಯುತ್ತಿದ್ದಳು. ಮಲಗಲು ಕೂಡ ಅಮ್ಮನ ಬಳಿಗೆ ಹೋಗತ್ತಿರಲಿಲ್ಲ.

"ಒಂದು ಸಾರಿ—ಅವನಿಗಿನ್ನೂ ನಾಲ್ಕೈದು ವರ್ಷ ಅಷ್ಟೆ. ಅಮ್ಮ ಅವನಿಗೆ ನೀರು ಹಾಕಲು ಎಣ್ಣೆ ಒತ್ತಿಬಿಟ್ಟರು. ನನಗೆ ಶಾಲೆಗೆ ಹೊತ್ತಾಯಿತು ಅಂತ ನಾನು ಓಡಿಬಿಟ್ಟೆ. ಮೈಗೆ ಎಣ್ಣೆ ಹಚ್ಚಿಕೊಂಡಿದ್ದವನು "ಅಕ್ಕಾ, ಅಕ್ಕಾ ಅಂತ ಕೂಗಿಕೊಳ್ಳುತ್ತ ನನ್ನ ಹಿಂದೆಯೇ ಓಡಿಬಂದು ಬಿಟ್ಟ. ಕೊನೆಗೂ ನಾನು ಹಿಂತಿರುಗಿ ಬಂದು ನೀರು ಹಾಕಲೇಬೇಕಾಯಿತು. ಅಬ್ಬಾ ಅವನಿಗೆ ಅಕ್ಷರಾಭ್ಯಾಸ ಮಾಡಿಸುವಾಗ ಚೆನ್ನಾಗಿತ್ತು— "ಅಯ್ಯೋ, ಅಕ್ಕನಿಗೆ

ಅಕ್ಷರ ಮರೆತು ಹೋಗಬಾರದೇ " ಎಂದು ದಿನವೂ ಅತ್ತು ಕರೆದು ರಂಪ ಮಾಡುತ್ತಿದ್ದ. ಸಂಜೆಯಾದರೆ ಸರಿ, ಸ್ನೇಹಿತೆಯರ ಮನೆಗೆ ಕರೆದುಕೊಂಡು ಹೋಗೆಂದು ಗಲಾಟೆ " ಎಂದು ಲಲಿತ ತನ್ನ ನೆರೆಮನೆಯವರಿಗೆ ಹೇಳುತ್ತಿದ್ದಳು.

ಆದರೆ ಆನಂದ ಎಳೆತನದ ಆನಂದನಾಗಿಯೇ ಉಳಿದಿರಲಿಲ್ಲ ಜೀವನದ ಸಿಹಿಕಹಿಗಳ ಅನುಭವ ಹೆಚ್ಚಿದಂತೆ ಅವನೂ ಬೆಳೆಯುತ್ತಾ ಬಂದ—ಅವನ ಮನಸು ವಿಕಾಸಗೊಳ್ಳುತ್ತಾ ಬಂತು. ಕಾಲು ಕುಂಟಾದಾಗಿನಿಂದ ಅವನ ಮನಸಿನ ಹದವೇ ಕೆಟ್ಟುಹೋಯಿತು ಆಗ ಅವನ ಸೇವೆಗೆ ಲಲಿತಳೇ! ಕಾಲಿಗೆ ದಿನವೂ ಎರಡೆರಡು ಬಾರಿ ತೈಲಹಚ್ಚಿ ಬಿಸಿನೀರಿನ ಶಾಖ ಕೊಡುತ್ತಿದ್ದಳು. ಅವನಿಗೆ ನೋವಾಗದಂತೆ ಕಾಲನ್ನು ನೀವುತ್ತಿದ್ದಳು. ಎಷ್ಟೋ ಬಾರಿ ನೋವಿನಲ್ಲಿ ಅವನು ಅವಳನ್ನು ಒದ್ದಿದ್ದ. ಆದರೆ ಅದೆಲ್ಲಾ ಕಾಹಿಲೆಯ ಫಲವೆಂದು ಅವಳಿಗೆ ಗೊತ್ತಿತ್ತು. ಅವನಲ್ಲಿದ್ದ ಪ್ರೀತಿ, ವಿಶ್ವಾಸ ಅದರಿಂದ ಇನಿತಾದರೂ ತಗ್ಗಲಿಲ್ಲ. ಹಿಂದೊಂದು ಸಾರಿ ಬಾಣಂತಿತನಕ್ಕೆಂದು ತವರು ಮನೆಗೆ ಹೋಗಿದ್ದಾಗ ಕೋಪಾವೇಶದಲ್ಲಿ ಬಾಯಿಗೆ ಬಂದಂತೆಲ್ಲಾ ಮಾತನಾಡಿದ್ದ ಆನಂದ. ಅಂದು ಮಾತ್ರ ಲಲಿತ ಬಹಳ ನೊಂದುಕೊಂಡು ಕಣ್ಣೀರು ಹಾಕಿದಳು. ಆದರೆ ಆಗಲೇ ಆನಂದ ತನ್ನ ತಪ್ಪು ತಿಳಿದು ಕ್ಷಮೆ ಬೇಡಿದ್ದ. ಅವಳೂ ಮನಸಾರೆ ಕ್ಷಮಿಸಿದಳು. ಅದಾದಮೇಲೆ ಆನಂದ ಕಾಲೇಜಿಗೆ ಸೇರಿದಾಗ ತನ್ನ ಗಂಡನ ಇಷ್ಟದ ವಿರುದ್ಧವಾಗಿ ಅವನನ್ನು ತಮ್ಮ ಮನೆಯಲ್ಲಿಯೇ ಇಟ್ಟುಕೊಂಡಳು. ಅವನ ಕಟುಮಾತುಗಳನ್ನೆಲ್ಲಾ ಹೊಟ್ಟೆಯಲ್ಲಿ ಹಾಕಿಕೊಳ್ಳುತ್ತಿದ್ದಳು.

" ಅವನಿಗೆ ನಾನಲ್ಲದೆ ಮತ್ತಾರಿದ್ದಾರೆ. ಅಮ್ಮನಿಂದ ಬಹಳ ದೂರವಾಗಿದ್ದಾನೆ. ಬಹಳ ಕಷ್ಟ ಅನುಭವಿಸಿದ್ದಾನೆ. ನಾನಾದರೂ ಅವನಿಗೆ ವಿಶ್ವಾಸ ತೋರಿಸದಿದ್ದರೆ ಮತ್ತಾರು ತೋರಿಸುವರು " ಎಂದುಕೊಂಡು ಅವನು ಏನಂದರೂ ಸುಮ್ಮನಿರುತ್ತಿದ್ದಳು.

ಆನಂದನ ಮನಸ್ಸನ್ನಾಕ್ರಮಿಸಿರುವ ಯೋಚನೆ ಏನೆಂದು ಬಹಳೇ ಯೋಚಿಸಿದರೂ ಒಗಟರಿಯಲಿಲ್ಲ. ಕೊನೆಗೆ ತಡೆಯಲಾರದೆ ಅವನನ್ನೆ ಮತ್ತೆ ಕೇಳಿದಳು.

"ನಿನಗೇನು" ಎಂಬ ಮಾತು ತಕ್ಷಣ ಅವನ ಬಾಯಿಗೆ ಬಂದಿತು. ಆದರೆ ಬಹು ಕಷ್ಟದಿಂದ ಬಿಗಿಹಿಡಿದು ನಿಟ್ಟುಸಿರಿಟ್ಟ.

ಲಲಿತಳಿಗೆ ಅವನ ನಿಟ್ಟುಸಿರು ಕಂಡು ಒಂದು ಬಗೆಯ ಸಂಕಟವಾಯಿತು.

"ನನಗೆ ಹೇಳದರೆ ನಾನೇನಾದರೂ—"

ಲಲಿತಳ ಮಾತು ಮುಗಿಯುವುದರಲ್ಲೇ ಆನಂದ ಬೇಸರದ ದನಿಯಲ್ಲಿ ಸಿಡುಕಿದ.

"ನಿನ್ನಿಂದೇನಾಗುತ್ತಿದೆ ಮಣ್ಣು—" ಎಂದ.

ಲಲಿತಳಿಗೆ ಬಹಳ ದುಃಖವಾಯಿತು ತನ್ನಿಂದ ಅವನಿಗೆ ಅಸಮಾಧಾನವಾಯಿತಲ್ಲಾ ಎಂದು ಕಣ್ಣಿನಲ್ಲಿ ನೀರು ತುಂಬಿಬಂತು.

"ಏನೋಪ್ಪ. ಮುಖ ಸಪ್ಪಗಿದೆಯಲ್ಲಾಂತ ಕೇಳಿದೆ ಅಷ್ಟೆ" ಎನ್ನುತ್ತಾ ಅಡಿಗೆಮನೆಯೊಳಗಿಂದ ಕೂಟು ತಂದು ಬಡಿಸಿದಳು ಕೂಟಿನೊಂದಿಗೆ ಆನಂದನ ತಟ್ಟೆಗೆ ಒಂದು ಹನಿ ಕಣ್ಣೀರು ಬಿದ್ದಿತು.

ಆನಂದನಿಗೂ ಮನಸಿನಲ್ಲಿ ಸಮಾಧಾನವಿರಲಿಲ್ಲ ಲಲಿತಳಿಗೆ ಉದ್ಧತವಾಗಿ ಉತ್ತರ ಕೊಡುವಾಗ ಮೈಮರೆತಿದ್ದ ಮರು ನಿಮಿಷವೇ ಅಸಮಾಧಾನ! "ಛೇ! ನಾನು ಹಾಗನ್ನಕೂಡದಾಗಿತ್ತು ಎಷ್ಟು ನೊಂದುಕೊಂಡಳೋ ಅಕ್ಕ" ಎಂದು ತನ್ನನ್ನು ತಾನೇ ಹಳಿದುಕೊಂಡ ಆದರೆ ಆ ಪಶ್ಚಾತ್ತಾಪವಿನ್ನೂ ಮಂಜುಮಂಜಾಗಿಯೇ ಉಳಿದಿತ್ತು ಅವನ ಮನೋರಂಗದ ಕೋಲಾಹಲಕ್ಕೆ ಅದೂ ಮೇಳ ಕೂಡಿಸಿತು.

ರಾತ್ರಿಯೆಲ್ಲಾ ಚಿಂತೆ!— ಪುಸ್ತಕ ಹಿಡಿದರೆ ಓದಲಾಗುತ್ತಲೇ ಇರಲಿಲ್ಲ. ಮಲಗೋಣವೆಂದರೆ ನಿದ್ರೆ ಬಾರದು. ಸುಮ್ಮನೆ ಹಾಸಿಗೆಯ ಮೇಲೆ ಹೀಗಿಂದ ಹಾಗೆ ಹೊರಳಾಡುತ್ತಿದ್ದ. ಯೋಚಿಸಿ ಯೋಚಿಸಿ ತಲೆ ಕಾದಿತ್ತು—ಚಿಟ್ಟು ಹಿಡಿದಿತ್ತು. ಪರಿತ್ಯಕ್ತಮಂದಿರದಲ್ಲಿ ಗಾಳಿ ಗುಂಯ್ಗುಟ್ಟುವಂತೆ ರಾಮುವಿನ ಮಾತುಗಳು ಅವನ ಮನಸಿನಲ್ಲಿ ಒಂದೇ ಸಮನಾಗಿ ಗುಂಯ್ಗುಡುತ್ತಿದ್ದುವು. ರಾತ್ರಿಯೆಲ್ಲಾ ದೂರದ ಗಡಿಯಾರದ ಗಂಟೆಯನ್ನೆಣಿಸುತ್ತಾ ಮಲಗಿದ್ದ. ನಿದ್ರೆ ಕಲ್ಪನೆಗೂ ನಿಲುಕದ ವಸ್ತುವಾಗಿತ್ತು.

೪

ಜೀವನದ ಎಲ್ಲಾ ದುರಂತಗಳಿಗೂ ಮೂಲ ಯಾವುದೋ ಒಂದು ಸಣ್ಣ ವಿಷಯ: ಯಾವುದಾದರೂ ಒಂದು ಸಣ್ಣ ಸಂಗತಿ. ಅನಿರೀಕ್ಷಿತವಾಗಿ, ಅವಿಚಾರವಾಗಿ ನಡೆದುಹೋಗುತ್ತದೆ ಅದನ್ನು ಮನುಷ್ಯ ಆಗ ಗಮನಕ್ಕೇ ತರುವದಿಲ್ಲ ಆದರೆ ಅಷ್ಟೆಲ್ಲ ವಿಚಾರದಿಂದಲೇ ಮಹಾ ದುರಂತ ಜರುಗಿ ಹೋಗುವುದು.

ಆನಂದ ಸ್ನಾನ ತೀರಿಸಿಕೊಂಡು ಮಡಿ ಬಟ್ಟೆತೊಟ್ಟು ಅಡಿಗೆ ಮನೆಗೆ ಹೋದ. ಲಲಿತ ಕಾಫಿ ಮಾಡುತ್ತಿದ್ದವಳು ಆವನು ಬರುವುದನ್ನೇ ಕಾದಿದ್ದಳು. ಅವನು ಬಂದೊಡನೆಯೇ ಕಾಫಿ ಸೋಸಲಾರಂಭಿಸಿದಳು . ಪದ್ಧತಿಯಂತೆ ಮಕ್ಕಳೆಲ್ಲಾ ಸುತ್ತುಗಟ್ಟಿದ್ದರು. ಹಾಲು ಹಾಕಿ ಸಕ್ಕರೆ ಡಬ್ಬಿಯ ಮುಚ್ಚಳ ತೆರೆಯುವಷ್ಟರಲ್ಲೇ ತೊಟ್ಟಿಲಲ್ಲಿದ್ದ ಕೈಗೂಸು ನಾಗವಲ್ಲಿ ಎದ್ದು ಅಳಲಾರಂಭಿಸಿದಳು. ಅವಳ ಅಳುವಿನ ದನಿ ಕೇಳಿದೊಡನೆಯೇ ಲಲಿತ ಅವಳನ್ನೆತ್ತಿಕೊಳ್ಳಲು ಹೋದಳು. ನಾಣಿ ಸುಮ್ಮನಿರದೆ ತನ್ನ ಯಜಮಾನಿಕೆ ತೋರಿಸುತ್ತಾ "ನಾನು ಕಾಫಿ ಕೊಡುತ್ತೇನೆ" ಎಂದು ಕಾಫಿ ಪಾತ್ರೆಗೆ ಕೈಹಾಕಿದ. ಕಾಫಿ ಚೆಲ್ಲಿಹೋದೀತೆಂದು ಆನಂದನಿಗೆ ಹೆದರಿಕೆ. ಎಷ್ಟು ಬೇಡ ಬೇಡವೆಂದರೂ ನಾಣಿ ಕೇಳಲಿಲ್ಲ. ಮೊಂಡು ಹತ್ತಿ ಕಾಫಿ ಪಾತ್ರೆಯನ್ನು ಗಟ್ಟಿಯಾಗಿ ಹಿಡಿದಿದ್ದ ಕೊನೆಗೆ ಆನಂದ ಅದನ್ನು ಕಿತ್ತುಕೊಳ್ಳಲು ಹೋದ. ಆವನು ಮಾಡಿದ ಅವಾಂತರದಲ್ಲಿ ಸಕ್ಕರೆಯ ಡಬ್ಬಿ ಕೆಳಕ್ಕೆ ಬಿದ್ದು ಸಕ್ಕರೆಯೆಲ್ಲ ಚೆಲ್ಲಿಹೋಯಿತು ಆನಂದನಿಗೆ ಕೋಪಬಂದು. ನಾಣಿಯ ಬೆನ್ನ ಮೇಲೊಂದು ಪೆಟ್ಟು ಕೊಟ್ಟ ನಾಣಿ ಮನೆ ಕಿತ್ತುಹೋಗುವಂತೆ ಕಿರಿಚಿಕೊಂಡ ಆ ಸಮಯಕ್ಕೆ ಸರಿಯಾಗಿ ಲಲಿತಳ ಗಂಡ ನರಸಿಂಹಯ್ಯನವರು ತಮ್ಮ ಕೋಣೆಯಿಂದ ಅಲ್ಲಿಗೆ ಬಂದರು

ನರಸಿಂಹಯ್ಯ ಸೌಜನ್ಯವನ್ನು ಕನಸಿನಲ್ಲಿಯೂ ಕಾಣದವರು. ಮಾತು, ನಡೆ, ನುಡಿ ಎಲ್ಲವೂ ಒರಟು! ಮನಸ್ಸಿಗೆ ಸಂಸ್ಕೃತಿಯ ಸೋಂಕು ಕೂಡ ಇರಲಿಲ್ಲ ಇದರಿಂದ ಸುಸಂಸ್ಕೃತರನ್ನು ಕಂಡರೆ ದ್ವೇಷ. ಎಲ್ಲರನ್ನೂ ಮನಸ್ಸಿಗೆ ಬಂದಂತೆ ಬಯ್ಯುವದು, ಇಷ್ಟ ಬಂದಂತೆ ಆಡುವದು ಅವರಿಗೆ ಸಾಮಾನ್ಯ

ಅಂತಹ ಗಂಡನೊಂದಿಗೆ ಗಂಟಾದಳು ಲಲಿತ. ಅದು ಅವಳ ದೌರ್ಭಾಗ್ಯವೋ, ಕಂಕಣದ ಕೂಡಿಕೆಯು ಕಾಕತಾಳವೋ, ವಿಧಿಯು ವೈಷಮ್ಯವೋ, ಹೇಳುವುದು ಕಷ್ಟ. ಅವರಿಬ್ಬರಿಗೂ ಎರಡು ಧ್ರುವಗಳಂತರ. ಲಲಿತಳನ್ನು ಅವರು ಮದುವೆಯಾದುದೂ ಮತ್ತಾರದೋ ಪ್ರೇರಣೆಯಿಂದ. ಊರುಬಿಟ್ಟು, ಕೇರಿ ಬಿಟ್ಟು, ತಾಯಿತಂದೆಯೊಂದಿಗೆ ಜಗಳವಾಡಿ ಬಂದಿದ್ದ ನರಸಿಂಹಯ್ಯನಿಗೆ ಪಾರ್ವತಮ್ಮನವರ ತಮ್ಮನ ಪರಿಚಯವಾಗಿ ಅವರ ಸಹಾಯದಿಂದ ಎಲ್ಲಿಯೋ ಕೆಲಸ ಸಿಕ್ಕಿತು. ಆಗ ಲಲಿತಳ ಮದುವೆಯ ವಿಚಾರವಾಗಿ ಬಹಳ ಯೋಚನೆಯೂ ನಡೆದಿತ್ತು. ಕೊನೆಗೆ ನರಸಿಂಹಯ್ಯನಿಗೇ ತೀರ್ಮಾನವಾಯಿತು. ನರಸಿಂಹಯ್ಯನೂ ಹುಡುಗಿಯನ್ನು ನೋಡಿ ಒಪ್ಪಿದ. ಲಲಿತ ನೋಡುವುದಕ್ಕೆ ಬಹಳ ಚೆನ್ನಾಗಿದ್ದಳು. ಸುಂದರರೂಪ, ತುಂಬುಮೈ—ಆದರೆ ಒಂದೇಒಂದು ಕಳಂಕವಿತ್ತು ಅವಳಲ್ಲಿ. ನರಸಿಂಹಯ್ಯನವರ ಅಭಿಪ್ರಾಯದಂತೆ-ಅವಳಿಗೆ ವಿದ್ಯಾಭ್ಯಾಸವಾಗುತ್ತಿತ್ತು. ಈಗಾಗಲೇ ಇಂಗ್ಲೀಷ ಚೆನ್ನಾಗಿ ಓದಿ ಬರೆಯಲು ಬರುತ್ತಿತ್ತು. ತಮ್ಮ ಹೆಂಡತಿಗೆತಮಗಿಂತ ಹೆಚ್ಚು ಬರುವುದೆಂದರೆ ನರಸಿಂಹಯ್ಯನವರಿಗೊಂದು ಅವಮಾನವಲ್ಲವೇ? ಆದರೂ ದಾಕ್ಷಿಣ್ಯ, ಲಲಿತಳ ಸುಂದರರೂಪಗಳಿಗೆ ಕಟ್ಟುಬಿದ್ದು ಅವಳನ್ನು ಮದುವೆಯಾದರು. ಲಲಿತಳಿಗೆ ಆನಂದನನ್ನು ಕಂಡರೆ ಎಷ್ಟು ಪ್ರೇಮವೋ ನರಸಿಂಹಯ್ಯನವರಿಗೆ ಅವನನ್ನು ಕಂಡರೆ ಅಷ್ಟೇ ದ್ವೇಷ. ಅವನು ಕಲಿತವನು, ಅವರು ಕಲಿತವರಲ್ಲ. ಹಿಂದೆ ಒಂದು ದಿನ ಯಾವುದೋ ಮಾತಿಗೆ ಮಾತುಬಂದು "ಓದು ಬರೆಹದ ವಿಚಾರ ನಿಮಗೇನು ಗೊತ್ತು?" ಎಂದುಬಿಟ್ಟಿದ್ದ ಆನಂದ. ಇದರಿಂದಲಂತೂ ಹುಣ್ಣಿನ ಬಾಯಿಗೆ ಮಣ್ಣು ಮೆತ್ತಿದಂತಾಗಿತ್ತು.

"ಯಾಕೋ ಆನಂದ, ಕೈಗುರಗುರಾನ್ನುತ್ತೀನೋ—ಅವನನ್ನು ಯಾಕೋ ಹೊಡೆದೆ" ಎನ್ನುತ್ತಾ ನರಸಿಂಹಯ್ಯ ಆನಂದನ ಕಡೆಗೇ ಬಂದರು.

"ಕಾಫಿ ಚೆಲ್ಲಿಬಿಡುತ್ತಿದ್ದ ಭಾವ—ಎಷ್ಟು ಹೇಳಿದರೂ ಕೇಳಲೇ ಇಲ್ಲ" ಎಂದ ಆನಂದ ಪಕ್ಕಕ್ಕೆ ಸರಿದು ಕುಳಿತ.

"ಹೌದು, ಹೌದು—ಅವನು ನಮ್ಮ ಮನೆ ಹಾಳು ಮಾಡುವವನು—ನೀನು, ದೇವರು. ನಮ್ಮನ್ನೆಲ್ಲಾ ಉದ್ಧಾರ ಮಾಡೋದಕ್ಕೆ ಹುಟ್ಟಿದ ಏಕಾದಶಾವತಾರ—ದೊಡ್ಡ ಮನುಷ್ಯ—ಮಕ್ಕಳನ್ನು ಹೊಡೆಯಲು ನಾಚಿಕೆ

ಆಗುವುದಿಲ್ಲ!" ಇನ್ನೂ ಬಾಯಿಗೆ ಬಂದುದನ್ನೆಲ್ಲಾ ಅಂದು ನರಸಿಂಹಯ್ಯ ಲಲಿತೆ ಬಗ್ಗಿಸಿಕೊಟ್ಟ ಕಾಫಿಯನ್ನು ಕೋಪದಿಂದ ಹೀರಿ ರಭಸದಿಂದ ಎದ್ದು ಹೊರಟುಹೋದರು

"ಅವರ ಸಮಾಚಾರ ನಿನಗೆ ಗೊತ್ತೇ ಇದೆ. ಅವರ ಹತ್ತಿರ ಮಾತಾಡಲು ಯಾಕೆ ಹೋದೆ ಹೇಳು" ಎಂದು ಲಲಿತ ಸಮಾಧಾನ ನೀಡಲು ಯತ್ನಿಸಿದಳು.

"ನೋಡಕ್ಕಾ, ಸಕ್ಕರೆಯೆಲ್ಲಾ ಚೆಲ್ಲಿದೆ. ಕಾಫಿಯೂ ಚೆಲ್ಲಿ ಹೋಗುತ್ತಿತ್ತು ಅಷ್ಟಕ್ಕೆ –"

"ಹೋಗಲಿ ಬಿಡು—ಇನ್ನು ಅವರ ಮಾತನ್ನೇ ಹಚ್ಚಿಕೊಂಡು ಕೊಳಿತುಕೊಳ್ಳಬೇಡ. ಅವರ ಸ್ವಭಾವವೇ ಹಾಗೆ" ಎಂದಳು ಲಲಿತ.

ಆದರೆ ಆನಂದನಿಗೆ ಸಮಾಧಾನವಾಗುವಂತಿರಲಿಲ್ಲ. ಮೊದಲೇ ಕದಡಿದ ಮನಸ್ಸು. ರಾತ್ರಿಯೆಲ್ಲಾ ನಿದ್ರೆಯಿಲ್ಲ. ಜತೆಗೆ ಎದ್ದೊಡನೆಯೇ ಈ ಕಟುಮಾತುಗಳು. ಮೌನದಲ್ಲಿಯೇ ಕಾಫಿ ಕುಡಿದು, ಮೆಲ್ಲನೆ ಅಲ್ಲಿಂದೆದ್ದು ಹೋದ.

"ನಾನು ನಾಣಿಯನ್ನು ಹೊಡೆಯಬಾರದಾಗಿತ್ತು. ಏನಿದ್ದರೂ ಅವರ ಮನೆ, ಅವರ ಮಗ. ಅವರಿಗಿಷ್ಟ ಬಂದಂತಿರಲೆಂದು ಸುಮ್ಮನಿರಬೇಕಾಗಿತ್ತು. ನಾನು ಹೊಡೆಯದೇ ಇದ್ದಿದ್ದರೆ ಇಷ್ಟೊಂದು ಮಾತಾಗುತ್ತಲೇ ಇರಲಿಲ್ಲ. ಆದರೆ ಹೊಡೆದುದೇ ತಪ್ಪೇ? ಅವನದೂ ತಪ್ಪಿಲ್ಲವೇ? ಇಷ್ಟಕ್ಕೇ ಭಾವ ಈ ಮಾತಾಡಬೇಕಾಗಿತ್ತೇ—ನಾನು ಇಲ್ಲಿರಲು ಬಂದುದೇ ತಪ್ಪು—ಹೋಟಲಿನಲ್ಲಿದ್ದಿದ್ದರೆ ಭಾವನಿಂದ ಬೈಸಿಕೊಳ್ಳಬೇಕಾಗಿರಲಿಲ್ಲ."

ಹೀಗೆಯೇ ಒಂದೇ ಸಮನಾಗಿ ಚಿಂತೆ. ಬಿರುಕುಬಿಟ್ಟಿದ್ದ ಕಂಚು ಚೂರು ಚೂರಾದಂತಾಯಿತು. ಆನಂದ ಅರ್ಧ ಪ್ರಜ್ಞೆಯುಳ್ಳವನಾಗಿದ್ದ.

ಕಾಲೇಜಿನ ಹೊತ್ತಿಗೆಂದು ಲಲಿತ ಬೇಗ ಬೇಗ ಅಡಿಗೆ ಮುಗಿಸಿ ಆನಂದನನ್ನು ಕರೆಯಲು ಬಂದಳು. ಎಷ್ಟು ಬಾರಿ ಊಟಕ್ಕೆ ಕರೆದರೂ ಆನಂದನ ಉತ್ತರವೇ ಬರದಿರಲು ಕೋಣೆಯ ಬಾಗಿಲು ತಳ್ಳಿ ನೋಡಿದರೆ ಆನಂದ ಆಗಲೇ ಹೊರಟು ಹೋಗಿದ್ದ.

"ಹೂಂ— ಬೆಳಿಗ್ಗೆಯಿಂದ ಒಂದು ತರಹವಾಗಿದ್ದಾನೆ. ಈಗ ಊಟವಿಲ್ಲದೆಯೇ ಹೊರಟುಹೋದ. ಎಲ್ಲಾ ನನ್ನಿಂದ. ನಾನು ಎಲ್ಲರಿಗೂ ಕಾಫಿ ಕೊಟ್ಟು ಹೋಗಿದ್ದರೆ ಈ ವಿಪರೀತವಾಗುತ್ತಲೇ ಇರಲಿಲ್ಲ." ಎಂದುಕೊಂಡು ಲಲಿತ ತನ್ನನ್ನು ತಾನೇ ಹಳಿದುಕೊಂಡಳು. ಅಡಿಗೆ ಮನೆಯಲ್ಲಿ ದೇವರ ಮುಂದೆ ಕುಳಿತು ಮನಸಾರೆ ಅತ್ತಳು.

* * * * *

ಆನಂದ ಬಹಳ ಕಷ್ಟದಿಂದ ಒಂದು ಗಂಟೆಯಕಾಲ ಕ್ಲಾಸಿನಲ್ಲಿ ಕುಳಿತಿದ್ದ. ಪಾಠ ಕೇಳುವುದರಲಿ ಒಂದು ಕಡೆ ಸಾವಧಾನವಾಗಿ ಕುಳಿತಿರಲೂ ಅವನಿಗೆ ನೆಮ್ಮದಿಯಿಲ್ಲ. ಕೊನೆಗೆ ಬೇಸರ ತಡೆಯಲಾರದೆ ವಿಶ್ವವಿದ್ಯಾನಿಲಯ ಸಂಘದ ಕಡೆಗೆ ಹೋದ. ನೋಟೀಸ್ ಬೋರ್ಡಿನ ಮೇಲೆ ಚುನಾಯಿತರ ಪಟ್ಟಿಯಿತ್ತು. ಅವನ ಸಹಪಾಠಿಯೇ ಕಾರ್ಯದರ್ಶಿಯಾಗಿ ಚುನಾಯಿತನಾಗಿದ್ದ. ಉಪಸಮಿತಿಗಳ ಸದಸ್ಯರ ಪಟ್ಟಿಯನ್ನು ಹಾಕಿದ್ದರು. ವಾಚನಾಲಯ ಮತ್ತು ಪುಸ್ತಕಭಂಡಾರಗಳ ಉಪಸಮಿತಿಯಲ್ಲಿ ಆನಂದನೂ ಒಬ್ಬ. ಆನಂದನಿಗೆ ಆಶ್ಚರ್ಯವಾಯಿತು. ಹಾಗೆಯೇ ಎಲ್ಲವನ್ನೂ ನೋಡಿಕೊಂಡ. ಕಾಲೇಜಿನ ಕಡೆಗೆ ಹಿಂತಿರುಗುತ್ತಿದ್ದಂತೆ ಸಂಘದ ಜವಾನ ಬಂದು ಒಂದು ಕಾಗದ ಕೊಟ್ಟುಹೋದ. ೧೦ನೆಯ ತಾರೀಖು ಸೋಮವಾರ ಉಪಸಮಿತಿಯ ಸಭೆ ಸೇರುತ್ತದೆ. ಸಂಚಾಲಕರ ಚುನಾವಣೆ, ಉಳಿದ ಕಾರ್ಯಕ್ರಮಗಳೆಲ್ಲ ನಿರ್ಣಯಿಸಬೇಕಾಗಿದೆ, ಆದಕ್ಕಾಗಿ ಸಭೆಗೆ ಬರಬೇಕೆಂದಿತ್ತು ಪತ್ರದಲ್ಲಿ. ಕಾಗದ ಓದಿಕೊಂಡು ಮುಂದೆ ನಡೆದಂತೆ ತಾನೇಕೆ ಸಂಚಾಲಕನಾಗಬಾರದು ಎನಿಸಿತು. ಉಪಸಮಿತಿಯಲ್ಲಿದ್ದವರು ಹನ್ನೆರಡು ಮಂದಿ. ಅವರಲ್ಲಿ ಏಳು ಮಂದಿಯ ಮತ ತನಗೆ ದೊರೆತರೆ ಸಾಕು. ಇನ್ನು ಅದರಲ್ಲಿ ಇಬ್ಬರು ಉಪಾಧ್ಯಾಯರು ಮತ್ತೆ ಮೂವರು ಹೆಂಗಸರು. ಆ ಹೆಂಗಸರನ್ನು ವೋಟು ಕೇಳಬೇಕೇ ಎಂದು ಒಂದು ನಿಮಿಷ ಹಿಂಜರಿದ. ಆದರೇನೀಗ ಎಂದುಕೊಂಡು ಕಾಲೇಜಿನ ಮೆಟ್ಟಿಲು ಹತ್ತಿ ಹೋಗುತ್ತಿದ್ದಂತೆ ಅವರ ಹೆಸರನ್ನೇ ನೋಡದಿದ್ದುದು ನೆನಪಾಯಿತು ಮತ್ತೆ ಸಂಘಕ್ಕೆ ಬಂದು ಅವರ ಹೆಸರು ತರಗತಿಗಳನ್ನೋದಿಕೊಂಡ. ಹೆಂಗಸರಲ್ಲೊಬ್ಬಳು ಇವನ ಸಹಪಾಠಿ ಮೀರಾ. ಮತ್ತೊಬ್ಬಳು ಇವನ ಆನರ್ಸ್ ಕ್ಲಾಸಿನಲ್ಲಿಯೇ ಮೊದಲವರ್ಷ ಓದುತ್ತಿದ್ದಳು.

"ಅವರನ್ನು ನೋಡುವುದಾದರೂ ಹೇಗೆ? ಅವರನ್ನು ನಿಮ್ಮ ಫೋಟೊ ಕೊಡಿರೆಂದು ಕೇಳುವುದಾದರೂ ಹೇಗೆ? ಮೀರಳಿಗಂತೂ ನನ್ನನ್ನು ಕಂಡರೇ ಆಗುವದಿಲ್ಲ. ಅವಳನ್ನು ಮನಸ್ವೀ ಬೈದಿದ್ದೇನೆ. ಅವಮಾನ ಪಡಿಸಿದ್ದೇನೆ. ಅವರು ನನಗೆ ಫೋಟೊ ಕೊಡುವರೋ ಇಲ್ಲವೋ—" ಮನಸ್ಸಿನಲ್ಲಿ ಚರ್ಚಿಸುತ್ತಾ ಮೆಟ್ಟಿಲು ಹತ್ತಿದ. ಅವರನ್ನು ಕೇಳುವುದಂತೂ ಕೇಳಿ ಬಿಡುವುದು ಕೊಟ್ಟರೆ ಸರಿ; ಇಲ್ಲದಿದ್ದರೆ ಇಲ್ಲ. ಹಾಗೆಯೇ ಆ ಮೊದಲನೆಯ ಆನರ್ಸಿನ ಳನ್ನು ಪರಿಚಯ ಮಾಡಿಕೊಳ್ಳಬೇಕಾಗಿತ್ತು.

ಆನಂದ ಮೊದಲು ಹೋಗಿ ಮೀರಳನ್ನು ಕಂಡು ಮಾತನಾಡಿದ ತಾನು ಸಂಚಾಲಕನಾಗಲು ಅವರು ಸಹಾಯ ಮಾಡಬೇಕೆಂದು ಬಹಳ ನಯವಾಗಿ ಕೇಳಿದ ಮೀರಳಿಗೆ ಆಶ್ಚರ್ಯ! ತಮ್ಮ ವಿಷಯವಾಗಿ ಕೊಂಚವಾದರೂ ಸೌಜನ್ಯ ಕೂಡ ತೋರಿಸದಿದ್ದವನು ತಾನಾಗಿಯೇ ಬಂದು ನಯವಾಗಿ ವಿನಯದಿಂದ ಮಾತಾಡುವದೆಂದರೆ ಏನೋ ಬದಲಾವಣೆಯೇ ಆಗಿರಬೇಕು ಎನ್ನಿಸಿತು. ತನ್ನ ಫೋಟೋವನ್ನು ಅವನಿಗೇ ಕೊಡುವುದಾಗಿ ಮಾತುಕೊಟ್ಟಳು. ಮೊದಲಿನ ಆನರ್ಸಿನ ಹುಡುಗಿಯನ್ನು ಪರಿಚಯ ಮಾಡಿಕೊಡುವುದಾಗಿಯೂ ಅವನೇ ಅವಳನ್ನು ಕೇಳಬೇಕೆಂದೂ ಹೇಳಿ ಅವಳನ್ನು ಕರೆತರಲು ತಮ್ಮ ಕೊಠಡಿಯೊಳಕ್ಕೋಡಿದಳು.

ಆನಂದನಿಗೆ ಹೆಂಗಸರ ಕೊಠಡಿಯ ಮುಂದೆ ನಿಲ್ಲಲು ಇಷ್ಟವಿರಲಿಲ್ಲ. ಆದ ರಿಂದ ಮೆಲ್ಲನೆ ಆ ಪಕ್ಕಕ್ಕೆ ಸರಿದು ಕಿಟಕಿಯ ಬಳಿ ನಿಂತ. ಕಿಟಕಿಯಿಂದ ಹೊರಗೆ ದೊಡ್ಡದೊಂದು ಮರ. ಮರದೆಲೆಗಳ ಸರಪರ ದನಿ ಕೇಳಿ ಆನಂದನ ಮನಸ್ಸಿಗೇನೋ ತಂಪಾಯಿತು. ಹಾಗೆಯೇ ಹೊರಗೆ ನೋಡಿದ. ಆಕಾಶದಲ್ಲಿ ಒಂದೇ ಒಂದು ಮೋಡ—ಕಪ್ಪುಮೋಡ ಬೆಳ್ಳಿಯಂಚಿನದು ಮೆಲ್ಲಮೆಲ್ಲನೆ ಗಾಂಭೀರ್ಯದಿಂದ ತೇಲಿಬರುತ್ತಿತ್ತು. ಗಿಡದೆಲೆಗಳು ತಂಗಾಳಿಯಲ್ಲಿ ಓಲಾಡುತ್ತಿದ್ದುವು ಬಿಸಿಲೇನೂ ಪ್ರಬಲವಾಗಿರಲಿಲ್ಲ ಹಕ್ಕಿಗಳು ಅಲ್ಲೊಂದು ಇಲ್ಲೊಂದು ಹೊರಬಂದು ಸದ್ದು ಮಾಡಿ ಹಾರಿ ಹೋಗುತ್ತಿದ್ದುವು. ಎಲ್ಲೆಲ್ಲಿಯೂ ನೀರವತೆ—ಶಾಂತಿ ಮನೆಮಾಡಿತ್ತು.

"ಗಾಳಿ ಬೀಸಿದಂತೆ ಮೋಡ ಸಾಗಬೇಕು. ಯಾವ ಕಡೆ ತೂರಿದರೆ ಆ ಕಡೆ ನಮ್ಮ ಮನಸ್ಸು ಹಾಗೆಯೇ—" ಎಂದುಕೊಂಡ ಮೋಡದ ಕಡೆಯೇ

ದಿಟ್ಟಿಸುತ್ತ. ಎಷ್ಟೋ ಹೊತ್ತು ಹಾಗೆಯೇ ನಿಂತಿದ್ದ. ಮನಸ್ಸಿಗೆ ಬೇಸರ ವಾಗಹತ್ತಿತು. ಎಷ್ಟು ಹೊತ್ತಾದರೂ ಮೀರಳಾಗಲೀ ಇನ್ನೊಬ್ಬಳಾಗಲೀ ಹೊರಬರಲೇ ಇಲ್ಲ. ಅವನಿಗಂತೂ ಮೊದಲೇ ತಲೆಭಾರ. ಹೊಟ್ಟೆ ಬೇರೆ ಹಸಿವು!

" ಎಂತಹ ಪ್ರಾಣಿಗಳಪ್ಪಾ ಇವರು. ಒಳಗೆ ಅವರು ಚಲ್ಲಾಟವಾಡ್ತು ವುದು, ಇಲ್ಲಿ ನಾವು ಅವರಿಗಾಗಿ ಊಳಿಗದವರಂತೆ ಬಿದ್ದಿರುವುದು ಥತ್ " ಎಂದುಕೊಂಡು ಹಿಂದಕ್ಕೆ ತಿರುಗಿದ.

ಆನಂದನಿಗೆ ತನ್ನ ಮುಂದೆ ಮಿಂಚುಬಂದು ನಿಂತಂತಾಯಿತು ಮೀರಾ ಆಕೆಯನ್ನು ಅವನಿಗೆ ಪರಿಚಯ ಮಾಡಿಕೊಟ್ಟು ಹೋದಳು. ಕೈಮೇಲೆತ್ತಿ ನಮಸ್ಕಾರ ಮಾಡಲೂ ಅವನಿಗೆ ತೋಚಲಿಲ್ಲ. ಅವಳ ಕಡೆಗೆ ತಲೆ ಎತ್ತಿ ನೋಡೋಣವೆಂದರೆ ಸಾಗಲಿಲ್ಲ. ಅದೇಕೋ ಏನೋ ಮನಸ್ಸಿನ ಲ್ಲಿದ್ದ ಮಾತುಗಳೆಲ್ಲ ತುದಿನಾಲಗೆಯಲ್ಲೇ ಹೂತು ಹೋದವು. ಏನು ಮಾಡಿ ದರೂ ಮಾತನಾಡಲಾಗದೇ ಹೋಯಿತು. ಕೊನೆಗೆ ಬಲು ಪ್ರಯಾಸದಿಂದ ಒಣಗಿ ಹೋದ ನಾಲಗೆಯನ್ನು ಒದ್ದೆಮಾಡಿಕೊಂಡು ಕನ್ನಡದಲ್ಲಿಯೇ " ವಾಚನಾಲಯದ—ಉಪಸಮಿತಿ-ಸಂಚಾಲಕ ಸ್ಥಾನಕ್ಕೆ-ನಿಮ್ಮ ವೋಟು- ನನಗೆ—" ಎಂದು ಅಸ್ಪಷ್ಟವಾಗಿ ಅಂದ. ಮೈಯೆಲ್ಲಾ ಒಂದು ಬಗೆಯ ಮಧುರ ನಡುಕ. ಮುಖ ಕೆಂಪಾಗಿ ಹೋಗಿತ್ತು. ರಕ್ತ ಒಮ್ಮೆಗೇ ತಲೆಗೆ ನುಗ್ಗಿ ಜಲಪಾತದಂತೆ ಸದ್ದು ಮಾಡುತ್ತಿತ್ತು.

" ನಿಮಗೇ ಕೊಡುತ್ತೇನೆ " ಆಕೆ ನಸುನಗುತ್ತಾ ಇಂಗ್ಲೀಷಿನಲ್ಲಿ ಉತ್ತರ ಕೊಟ್ಟಳು. ಆನಂದನ ಒದ್ದಾಟ ಕಂಡು ಆಕೆಗೆ ನಗುಬಂದಿತು.

ಆನಂದನಿಗೆ ಮುಂದೇನು ಮಾತನಾಡಬೇಕೆಂಬುದು ತೋಚಲಿಲ್ಲ. ಆದರೆ ಏನಾದರೂ ಹೇಳಬೇಕೆಂಬ ಆಸೆ, ಆತುರ, ತವಕ, ಅವಳ ಮಾತು ನೇರವಾಗಿ ಅವನ ಹೃದಯವನ್ನೇ ಹೊಕ್ಕಂತಾಗಿತ್ತು. ಮುಂದೆಲ್ಲಾ ಶೂನ್ಯವಾಗಿ ತೋರಿತು. ತಲೆಯಲ್ಲೇನೋ ಯೋಚನೆ ಸುಳಿದಂತಾಯಿತು. ತನಗರಿವಿಲ್ಲ ದೆಯೇ ಆಕೆಯನ್ನು ಕುರಿತು " ನಿಮ್ಮನ್ನು—ಮಾತನಾಡಿಸಲು—ಹೇಗೆ? " ಎಂದುಬಿಟ್ಟ!

ಆಕೆ ತಕ್ಷಣವೇ ಹುಬ್ಬುಗಂಟಿಕ್ಕಿದಳು. ಅವನ ಪ್ರಶ್ನೆ ಅಸಮಂಜಸ- ಮತ್ತೆ ವಿಚಿತ್ರವಾಗಿ ತೋರಿತು.

" ನೀವಂದುದು ನನಗೆ ಅರ್ಥವಾಗಲಿಲ್ಲ " ಎಂದಳು ಇಂಗ್ಲೀಷಿನಲ್ಲಿಯೇ.

ಆನಂದನಿಗೆ ಆ ನಿಮಿಷದಲ್ಲೆಂತಹುದೋ ಆವೇಶ ಬಂದಂತಾಯಿತು. ಆ ಆವೇಶದಲ್ಲಿ ಅರಿವಿಲ್ಲದೆಯೇ ಮಾತನಾಡಿಬಿಟ್ಟ.

" ನಿಮ್ಮ ಹೆಸರು ಬಹಳ ಉದ್ದ. ಅದನ್ನು ಮೊಟಕು ಮಾಡಿ ಕೂಗುತ್ತೇನೆ. "

" ಎಂದರೆ? "

ಈ ಅನಿರೀಕ್ಷಿತ ಮಾತಿನಿಂದ ಆಕೆ ನಿಜವಾಗಿ ಹಿಮ್ಮೆಟ್ಟಿದಳು. ಅದೆಂತಹ ಮಾತು ಅವನದು! ತನ್ನ ಹೆಸರು ದೊಡ್ಡದಂತೆ—ಅದಕ್ಕಾಗಿ ಅವನು ಅದನ್ನು ಮೊಟಕು ಮಾಡುವನಂತೆ! ನಾಗರಿಕ ನಡವಳಿಕೆಯರಿಯದ ಅಸಭ್ಯ! ಎಂತಹ ಅಸಭ್ಯಮಾತು? ಉದ್ಧತ ವರ್ತನೆ! ಆನಂದ ತುಟಿ ಕಚ್ಚಿಕೊಂಡ. ಆ ಮಾತುಗಳನ್ನು ಅವನು ಆಡಬೇಕೆಂದಿರಲಿಲ್ಲ. ಆದರೆ ಅವು ತಾವೇ ತಾವಾಗಿ ತಲೆಯಿಂದ ಚಿಮ್ಮಿ ಬಂದಿದ್ದುವು. ಆಡಿದುದನ್ನಂತೂ ಈಗ ಅಳಿಸುವಂತಿಲ್ಲ. ಏನು ಮಾಡಲೂ ತೋಚದೆ ಮತ್ತೆ ನಾಲ್ಕಾರು ಮಾತುಗಳನ್ನು ಅಸ್ಪಷ್ಟವಾಗಿ ಆಡಿದ. ಆಕೆಗೆ ಕೋಪದಿಂದ ರಕ್ತ ಮುಖಕ್ಕೇರಿ ಮುಖವೆಲ್ಲಾ ಕೆಂಪಾಯಿತು. ಆಕೆಯೂ ನಾಲ್ಕು ಮಾತುಗಳಲ್ಲಿ ಅವನ ಅಸಭ್ಯಮಾತುಗಳನ್ನು ಛೀಮಾರಿ ಹಾಕಿದಳು. ನಮಸ್ಕಾರ ಕೂಡ ಮಾಡದೆ ಕೋಪದಲ್ಲಿ ತಮ್ಮ ಕೋಣೆಯೊಳಕ್ಕೆ ಅವಸರವಸರವಾಗಿ ಹೊರಟುಹೋದಳು. ಆನಂದ ಮೌನವಾಗಿ ಹಿಂತಿರುಗಿದ. ಮನಸು ಮೊದಲಿಗಿಂತಲೂ ಭಾರವಾಗಿತ್ತು. ಮೈ ಜುಮ್ಮೆನ್ನುತ್ತಿತ್ತು. ಆದರೆ ಹೃದಯದಲ್ಲಿ ಮಾತ್ರ ಯಾವುದೋ ಅವ್ಯಕ್ತ ರಾಗ ಹಿನ್ನೆಲೆಯಲ್ಲಿ ಮುಸಕುಮುಸಕಾಗಿ ಮೂಡಿ ಕಾಣುತ್ತಿತ್ತು.

ಆಕೆಯನ್ನು ಕಂಡುದು ಅದೇ ಮೊದಲಬಾರಿಯಾದರೂ ಆ ಮೊದಲ ಭೇಟಿಯಲ್ಲಿಯೇ ಏನೋ ಒಂದು ಕಸವಿಸಿ. ಸೌಹಾರ್ದಕ್ಕೆ ಬದಲು ಬಿರುಸ್ಸು ನುಡಿ. ಮನಸ್ಸೊಂದು ಮಾದರಿಯಾಗಿತ್ತು ತಾನು ಹಾಗಂದುದು ತಪ್ಪು ಎನಿಸಿತು ಎಷ್ಟೋ ಬಾರಿ. ಆಕೆಯನ್ನು ಕ್ಷಮೆ ಬೇಡಲೇ ಎಂದೂ ಎಷ್ಟೊ ಬಾರಿ ಎಂದುಕೊಂಡ. ಆದರೆ ಆಕೆ ಕ್ಷಮೆ ನೀಡುವಳೆಂದಾದರೂ ಭರವಸೆಯೆಲ್ಲಿ?

ಆನಂದ ಈ ಬಿಸಿಲಿನಲ್ಲೇ ಮನೆಗೆ ಹಿಂತಿರುಗಿ ಊಟಕ್ಕೆ ಕುಳಿತ. ಕೆಟ್ಟ, ಕೆಲಸ ಮಾಡಿಬಿಟ್ಟೆನೆಂದು ಮನಸ್ಸು ಒಂದೇ ಸಮನಾಗಿ ಚುಚ್ಚುತ್ತಿತ್ತು. ಆಕೆ ಏನೆಂದುಕೊಂಡಳೋ—ತನ್ನ ವಿಚಾರವಾಗಿ ಅವಳಿಗೆ ಕೆಟ್ಟ ಅಭಿಪ್ರಾಯ ಒಂದಿರಬಹುದು, ಎಂದು ಕಾತರ, ಕಳವಳ. ತನ್ನ ವಿಷಯವಾಗಿ ಯಾರೇನೆಂದರೂ ಯಾರೇನೆಂದುಕೊಂಡರೂ ಗಮನವನ್ನೇ ಕೊಡದವನಿಗೆ ಇಂದ ಆಕೆ ತನ್ನ ವಿಷಯವಾಗಿ ಏನೆಂದುಕೊಂಡಿರಬಹುದೆಂಬ ಆಸಕ್ತಿ. ಇಷ್ಟಾದರೂ ಹೃದಯದಲ್ಲಿ ಕಾತರದ ಜತೆಗೊಂದು ಅವ್ಯಕ್ತ ಮಾಧುರ್ಯ! ಅವಸರದಲ್ಲಿ ನಾಲ್ಕು ತುತ್ತು ಅನ್ನ ತಿಂದು ಒಂದು ರೂಮಿನಲ್ಲಿ ಹಾಸಿಗೆಯಮೇಲೆ ಬಿದ್ದುಕೊಂಡ. ಅದೇನು ಕಲ್ಪನೆಯೋ ಅದೇನು ಚಿಂತೆಯೋ ಎದ್ದುನಿಂತು ಶತಪಥ ತಿರುಗಿದ. ಆಗಾಗ ಬಾಯಿಂದ ಯಾವುದೋ ಗೀತವನ್ನು ಸೀಟಿಹಾಕುತ್ತಿದ್ದುದು ಮಾತ್ರ ಹೊಸತು!

೫

ಆಕೆಗೆ ಮನಸ್ಸು ಅಲ್ಲೋಲ ಕಲ್ಲೋಲವಾಗಿತ್ತು. ಎಂತಹ ವಿಚಿತ್ರ ವ್ಯಕ್ತಿ? ಅಂತಹ ಪ್ರಶ್ನೆಯನ್ನೇ ಕೇಳುವುದು? ಕೋಪದಲ್ಲಿ ಅವನನ್ನ ಮನಸ್ಸಿಗೆ ಬಂದಂತೆಲ್ಲಾ ಅಂದು ಕೊಠಡಿಯೊಳಕ್ಕೆ ಓಡಿದಳು. ತನ್ನ ಮನಸ್ಸಿನ ತಳಮಳವನ್ನು ಯಾರಿಗಾದರೂ ತಿಳಿಸಬೇಕು. ಇಲ್ಲದಿದ್ದರೆ ಅದರ ಒತ್ತಡದಿಂದ ನೀಗುವಂತಿಲ್ಲ. ತನ್ನ ಸಹಪಾಠಿಯ ಬಳಿಗೆ ಓಡಿಹೋಗಿ ಒಂದೇ ಉಸಿರಿನಲ್ಲಿ "ಲೇ ಪ್ರಭಾ—ಆತನನ್ನು ಏನೇನೋ ಅಂದು ಬಿಟ್ಟೆ ಕಣೇ—ಏನೋ ಆಗಿಹೋಯಿತು. ನಾನು ಹಾಗನ್ನಬೇಕೆಂದಿರಲಿಲ್ಲ ಆದರೆ ಆ ಸಮಯದಲ್ಲಿ ಹಾಗಾಯಿತು. ಏನು ಮಾಡಲೀ?" ಎಂದಳು. ಮುಖದಲ್ಲಿ ಉದ್ವೇಗ ಕುದಿಯುತ್ತಿತ್ತು. ಧ್ವನಿ ನಡುಗುತ್ತಿತ್ತು. ತುಟಿಯ ಎಂದಿನ ರಂಗು ಬಿಳಿಚಿಕೊಂಡಿತ್ತು. ಅದೇ ತಾನೇ ಅವನನ್ನು ಕಂಡುದು, ಅವನು ಆಡಿದ ಮಾತುಗಳು, ತಾನು ಅವನಿಗೆ ಕೊಟ್ಟ ಉತ್ತರಗಳೆಲ್ಲ ಅವಳ ಉದ್ವೇಗದಲ್ಲಿ ಕಲಸುಮೇಲೋಗರವಾಗಿತ್ತು. ಅಸ್ಪಷ್ಟವಾಗಿ ಎಲ್ಲವೂ ತಲೆಯಲ್ಲಿ ಹೀಗಿಂದ ಹಾಗೆ ಸುಳಿದಾಡುವಂತೆ, ಧುಮ್ಮಿಕ್ಕಿ ಕುಣಿಯುವಂತೆ ತೋರುತ್ತಿತ್ತು. ಅವನಾಡಿದ ಕೊನೆಯ ಮಾತುಗಳಿಗೆ ತಾನೂ ಬಹಳ ಉದ್ವೇಗದಿಂದಲೇ ಕೋಪದ ಮಾತನ್ನಾಡಿ

ದ್ದಳು. ತನ್ನ ವಿಚಾರ ತನ್ನ ಕೈಯಲ್ಲಿ ಆಗ ಉಳಿಸಿಕೊಳ್ಳದೆ ಗಾಳಿಯಲ್ಲಿ ಹಾರಿಬಿಟ್ಟಿದ್ದಳು. ಇದುತನಕ ಆ ಮಾತಿನ ಉದ್ವೇಗ ಉಳಿದಿರಲಿಲ್ಲ. ವಿಚಾರ ವಿನ್ನೂ ತಿಳಿಯಾಗಿರಲಿಲ್ಲ ಮನಸ್ಸು ಹದಗೊಂಡಿರಲಿಲ್ಲ. ಅದರಿಂದಲೇ ಅವಳ ಮಾತಿನ ಅರ್ಥ ಯಾರಿಗೂ ಆಗುವಂತಿರಲಿಲ್ಲ.

"ಲೇ ಪ್ರಭಾ—ಕೇಳೇ ಇಲ್ಲಿ, ಲೇ" ಎಂದಳು.

ಪ್ರಭಾ ಮೆಲ್ಲಗೆ ಅವಳ ಕಡೆ ತಿರುಗಿ ಶಾಂತವಾಗಿಯೇ "ನೋಡೇ—ಸುಮ್ಮನೆ ಗಾಬರಿಯಾಗಬಾರದು. ಮೊದಲು ತಿಂಡಿತಿಂದು ಕೊಂಚ ಸುಧಾರಿಸಿಕೋ. ಆ ಮೇಲೆ ಎಲ್ಲವನ್ನೂ ಸಾವಧಾನವಾಗಿ ಹೇಳು" ಎಂದಳು.

ಅವಳಿಗೆ ಪ್ರಭೆಯ ಮಾತು ಕೇಳುವಷ್ಟು ಸ್ತಿಮಿತವಿರಲಿಲ್ಲ. ಮನಸ್ಸಿನಲ್ಲಿ ಕೊರೆಯುತ್ತಿದ್ದುದನ್ನು ಮೊದಲು ಹೇಳಿಬಿಡಬೇಕು. ಆಮೇಲೆ ಉಳಿದುದೆಲ್ಲಾ ಎಂದು ಅವಳ ತವಕ. ಆದರೆ ಪ್ರಭಾ ಮಾತ್ರ ಕೊಂಚವೂ ಗಾಬರಿಗೊಳ್ಳದೆ ಎಂದಿನಂತೆಯೇ ಶಾಂತವಾಗಿ ತಿಂಡಿತಿನ್ನುತ್ತ ಕುಳಿತಳು. ಆಕೆ ಮಾತ್ರ ಸುಮ್ಮನೆ ಒದ್ದಾಡುತ್ತಿದ್ದಳು. ಪ್ರಭಾ ಎಷ್ಟು ಹೊತ್ತಿಗೆ ತಿಂಡಿತಿಂದು ಮುಗಿಸುವಳೋ ಎಂದು ಕಾದಿದ್ದಳು. ತಿಂಡಿಯನ್ನು ಅವಸರವಸರವಾಗಿ ಮುಕ್ಕುತ್ತ ಪ್ರಭೆಗೆ ಎಲ್ಲವನ್ನೂ ಹೇಳಿದಳು. ಮತ್ತೆ ಅದೇ ಉದ್ವೇಗ, ಅದೇ ಕಲಸು. ಪ್ರಭಾ ಮತ್ತೊಮ್ಮೆ ಪ್ರಶ್ನಿಸಿ ಎಲ್ಲವನ್ನೂ ಸರಿಯಾಗಿ ಕೇಳಿ ತಿಳಿದು ನಕ್ಕುಬಿಟ್ಟಳು

"ಅಯ್ಯೋ ಇಷ್ಟೇನೇ - ಅದಕ್ಕೆಷ್ಟೊಂದು ಗಲಾಟೆ, ಗಾಬರಿ! ಹುಚ್ಚು ಹುಡುಗಿ ಕಣೇ! ಅವನೇನೋ ಅಂದ, ಅದಕ್ಕೆ ನೀನೂ ಸರಿಯಾಗಿಯೇ ಅಂದೆ- ಅವನ ಸೊಕ್ಕು ಮುರಿಯುವಂತೆ. ಅದರಲ್ಲಿ ನಿನ್ನದೇನು ತಪ್ಪು!—ಸುಮ್ಮನೆ ಯೋಚಿಸುತ್ತ ಕೂತುಕೋ—ಹೋಗಿ ಮೂಲೆಯಲ್ಲಿ ಕುಳಿತ್ತಾಳು—ಹುಚ್ಚಿ! ಏಳು ಏಳು—ಕ್ಲಾಸಿಗೆ ಹೋಗೋಣ" ಎಂದಳು ಪ್ರಭಾ

ಆದರೆ ಆಕೆಗೆ ಅಲ್ಲಿಂದ ಹೊರಡಲು ಮನಸ್ಸೇ ಆಗದು. ಏನು ಮಾಡಿದರೂ ಪ್ರಭಾ ಬಿಟ್ಟರೆ ತಾನೆ! "ಸಣ್ಣ ಪುಟ್ಟ ವಿಚಾರಕ್ಕೆಲ್ಲಾ ಆಕಾಶವೇ ಉರುಳಿದ ಹಾಗಾಡಿದರೆ ಉಳಿದ ಹಾಗೆಯೇ" ಎನ್ನುತ್ತಾ ಪ್ರಭಾ ಅವಳನ್ನು ಕ್ಲಾಸಿಗೆ ಎಳೆದುಕೊಂಡು ಹೋದಳು.

ಅನಸೂಯಾ ಆ ದಿನವೆಲ್ಲಾ ಸಪ್ಪಗಿದ್ದಳು. ಏನೇ ಮಾಡಿದರೂ ಮೌನ ಬಿಡಲಿಲ್ಲ. ಪ್ರಭೆಯ ಮಾತು ಕೇಳಿಯೂ ಕೇಳದಂತಿದ್ದಳು. ತುಟಿ ಪಿಟಕ್ಕೆನ್ನ ಲಿಲ್ಲ. ಏನೋ ಗಾಢವಾದ ಚಿಂತೆ—ಅಗಾಧ ಕಡಲಿನಲ್ಲಿ ಮುಳುಗಿದಂತೆ—ವಿಚಾರಗಳು—ಸಾವಿರ ಅಲೆಗಳಂತೆ ಬಂದು ಅಪ್ಪಳಿಸುತ್ತಿದ್ದವು. ಆದರೆ ಇನ್ನೂ ಸ್ಪಷ್ಟವಾಗಿರಲಿಲ್ಲ; ತಿಳಿಯಾಗಿರಲಿಲ್ಲ. ಆ ವಿಚಾರ ಏನು ಎಂತೆಂಬುದನ್ನು ಅವಳು ಗುರುತಿಸುವುದರಲ್ಲೇ ಮತ್ತೊಂದು ಯೋಚನೆ ಬಂದು ಅದನ್ನು ಮಾಸಿ ಬಿಡುತ್ತಿತ್ತು. ಹೀಗಾಗಿ ಅವಳಿಗೇ ತನ್ನ ಯೋಚನೆಗಳು ಸ್ಪಷ್ಟವಾಗಿ ತಿಳಿದಿರಲಿಲ್ಲ. ಅಂತಹ ಸ್ಥಿತಿಯಲ್ಲಿ ಉಳಿದವರೊಂದಿಗೆ ಮಾತಾಡುವುದು ಹೇಗೆ? ಉಳಿದವರಿಗೆ ಅವುಗಳನ್ನು ತಿಳಿಸುವುದಾದರೂ ಹೇಗೆ? ಮುಖ ಸಪ್ಪಗಾಗಿತ್ತು; ಏನೋ ಕಳವಳ, ಕಡೆದಾಟ ಮನಸ್ಸಿನಲ್ಲಿ!

ಅನುವಿನ ಮನಸ್ಸು ತುಂಬಾ ಎಳಸು. ಎಲ್ಲರನ್ನೂ ಹಾಸ್ಯಮಾಡಿ ನಕ್ಕು ನಗಿಸುವ ಸ್ವಭಾವ. ಹೊಸಬರು ಹಳಬರೆಂಬ ಭೇದ ತಾರತಮ್ಯವೇ ಇರಲಿಲ್ಲ. ಹುಡುಗಾಟ, ಚೆಲ್ಲಾಟ ಅವಳ ಜೀವದುಸಿರು. ಇದರಿಂದ ಅವಳು ಎಲ್ಲ ರೊಂದಿಗೂ ಬಹಳ ಸ್ವಾತಂತ್ರ್ಯ ವಹಿಸುತ್ತಿದ್ದಳು. ಹುಡುಗರ ಸರಿಗೆ ಸರಿಯಾಗಿ ನಿಂತು ಜಗಳ-ಹಾಸ್ಯ ನಡೆಸುತ್ತಿದ್ದಳು. ಅವಳ ಈ ಹಾಸ್ಯಮನೋಭಾವವನ್ನು ಅವಳ ಸ್ನೇಹಿತರೂ ಉಪಾಧ್ಯಾಯರೂ ಮೆಚ್ಚಿಕೊಂಡಿದ್ದರು. ಆದರೆ ಹಲವು ವೇಳೆ ಅವಳ ಹುಡುಗಾಟ ಮಿತಿಮೀರುತ್ತಿತ್ತು. ಇದರಿಂದ ಹಲವರು ಅವಳನ್ನು "ಅಮೆಜಾನ್ ಅನಸೂಯಾ" "ಗಂಡುಬೀರಿ" ಎನ್ನುತ್ತಿದ್ದರು. ಆದರೆ ಅವಳು ಇದನ್ನೆಲ್ಲಾ ಲೆಕ್ಕಿಸುತ್ತಲೇ ಇರಲಿಲ್ಲ. ಇದು ಯಾವುದರ ಪರಿವೆಯೂ ಅವಳಿಗಿಲ್ಲ. ಎಲ್ಲರನ್ನೂ ಗೇಲಿ ಮಾಡಬೇಕು. ಯಾರೇನಾದರೂ ಅನ್ನಲಿ, ಅವಳು ಮಾತ್ರ ಗೇಲಿ ಮಾಡುವುದನ್ನು ಬಿಡುತ್ತಿರಲಿಲ್ಲ. ಅದು ಅವಳ ಸಾಮಾನ್ಯದ ಕೆಲಸ.

ಹಿಂದೊಮ್ಮೆ—ಅವಳಿನ್ನೂ ಇಂಟರ್ಮೀಡಿಯೇಟ್ ಕ್ಲಾಸಿನಲ್ಲಿ ಓದುತ್ತಿದ್ದಾಗ—ಅವಳ ಸಹಪಾಠಿಯೊಬ್ಬಳು ಉಪಾಧ್ಯಾಯರ ಪತ್ನಿ. ಅನು ಅವಳನ್ನು ಗೋಳು ಹೊಯ್ದುಕೊಳ್ಳುತ್ತಿದ್ದಳು. ಒಂದು ದಿನ ಅದೇ ಉಪಾಧ್ಯಾಯರು ಪಾಠ ಹೇಳಲು ಬಂದಾಗ ಅವರ ಪತ್ನಿಗೆ ಜಾಗ ಸಿಗದಂತೆ ಮಾಡಿಬಿಟ್ಟಳು. ಉಪಾಧ್ಯಾಯರೇನೋ ಪತ್ನಿಯನ್ನು 'ಕುಳಿತುಕೋ' ಎಂದರು.

ಆದರೆ ಆಕೆ ಮಾತ್ರ ಒದ್ದಾಡಿದಳು. "ಜಾಗವಿಲ್ಲ"ವೆಂದು ನಾಚಿಕೆಯಿಂದ ತಲೆ ತಗ್ಗಿಸಿದಳು. ಆಗ ಅನು ಎದ್ದು ನಿಂತು "ನಿಮ್ಮ ಪಕ್ಕದಲ್ಲೇ ಕೂರಿಸಿಕೊಳ್ಳಿ" ಎಂದಿದ್ದಳು. ತರಗತಿಗೆ ತರಗತಿಯೇ ನಗೆಯ ಹೊಗೆಯಲ್ಲಿ ತೇಲಾಡಿತು.

ಈ ಹಾಸ್ಯಪ್ರವೃತ್ತಿಯನ್ನೇ ಅವಳಲ್ಲಿ ಎಲ್ಲರೂ ಮೆಚ್ಚುತ್ತಿದ್ದರು ಇದರಿಂದ ಯಾವಾಗಲೂ ಆಕೆ ತುಂಬು ನಗೆಯಿಂದ ಅರಳಿ ಎಲ್ಲರನ್ನೂ ಬೆರಗಾಗಿಸುತ್ತಿದ್ದುದು. ಅವಳ ಸಹಪಾಠಿಗಳಂತೂ ಅವಳನ್ನು ಕಂಡರೆ ವಿಲವಿಲನೆ ಒದ್ದಾಡುತ್ತಿದ್ದರು. ದೀಪಕಂಡ ಹುಳು ರೆಕ್ಕೆ ಬಡಿಯುವಂತೆ ಅವರ ಹೃದಯಗಳು ಬಡಿಯುತ್ತಿದ್ದುವು. ಅವಳಲ್ಲಿದ್ದ ಯಾವುದೋ ಒಂದು ಹೊಸತನ ಕಾಲೇಜಿನ ಹುಡುಗರನ್ನೂ ಉಪಾಧ್ಯಾಯರನ್ನೂ ಅವಳ ಬಳಿಗೆ ಸೆಳೆಯುತ್ತಿತ್ತು. ಒಂದು ದಿನ ಅವಳ ಸಹಪಾಠಿಯೊಬ್ಬ ವೀಳ್ಯದೆಲೆ ಹಾಕಿಕೊಂಡು ಬಂದಿದ್ದ. ತುಂಟಿ ಕೆಂಪಾಗಿತ್ತು. ಆಗ ಅನು ಅವನನ್ನು 'ನೀವು ತುಟಿ ರಂಗುಪಯೋಗಿಸುವಿರಾ' ಎಂದು ಕೇಳಿ ನಕ್ಕಿದ್ದಳು.

ಇಷ್ಟಾದರೂ ಅನುವಿನ ಮನಸ್ಸು ಬೆಳ್ಳಿಯಂತೆ. ಬೇಗ ಕಾದು ಬೇಗ ಆರುತ್ತಿತ್ತು. ಬಹು ಬೇಗನೆ ಒಂದೊಂದು ಸಾರಿ ವ್ಯಾಕುಲಗೊಳ್ಳುತ್ತಿದ್ದಳು. ಅಸಮಾಧಾನ ಬಹುಬೇಗ ಅವಳ ಮನಸ್ಸಿನಲ್ಲಿ ಮೂಡಿ ಬಹಳ ಬೇಗನೇ ಮಾಸಿ ಹೋಗುತ್ತಿತ್ತು. ಯಾವ ಕ್ಷಣದಲ್ಲಿ ಆಕೆ ಕೋಪಗೊಳ್ಳುವಳೋ ನೊಂದುಕೊಳ್ಳುವಳೋ ಹೇಳಲಾಗುತ್ತಿರಲಿಲ್ಲ. ನಗೆಯ ಹೊಗೆಯ ಹಿಂದಿನಿಂದ ಒಂದೊಂದು ಬಾರಿ ನೋವಿನ ಕೆಂಜೆಳಕು ತೋರಿ ಮರುನಿಮಿಷವೇ ಮಾಯವಾಗುತ್ತಿತ್ತು.

ಅನುವಿಗೆ ಮನಸ್ಸಿನ ಹದ ಕೆಟ್ಟು ಹೋದುದರಿಂದ ಮಾತನಾಡಲಿಷ್ಟವಿರಲಿಲ್ಲ. ಹಾಸ್ಯವೆಲ್ಲಾ ಎಲ್ಲೋ ಹಾರಿ ಹೋಗಿತ್ತು. ಮುಖದ ಮೇಲೆ ಚಿಂತೆ ಆಡಳಿತ ನಡೆಸುತ್ತಿತ್ತು. ಎಲ್ಲರಿಗೂ ಇದರಿಂದ ಬಹಳ ಆಶ್ಚರ್ಯವಾಯಿತು. ನಗೆಯಲ್ಲದೆ ಅವಳ ಮುಖದಲ್ಲಿ ಬೇರೆ ಯಾವ ಭಾವವನ್ನೂ ಕಾಣದವರಿಗೆ ಇಂದು ವ್ಯಾಕುಲ ಕಂಡು ವಿಸ್ಮಯವಾಯಿತು ಅವಳ ಅಬ್ಬರವೆಲ್ಲಿಯೋ ಅಡಗಿಹೋಗಿ ಮೌನಮೂಡಿತ್ತು.

ಪಾಠ ಸಾಗುತ್ತಿತ್ತು. ಆದರೆ ಅವಳಿಗೆ ಅದರ ಚಿಂತೆಯೇ ಇಲ್ಲ. ಅದರ ಕಡೆಗೆ ಗಮನವೂ ಇಲ್ಲ. "ಅವನ ಮಾತಿನ ಹಿಂದಿನ ಗೂಢವೇನು? ಅದರಲ್ಲಿ ಯಾವ ಯೋಚನೆಯಿತ್ತು? ಅವನು ಹಾಗೇಕೆ ಮಾತನಾಡಿದ?" ಎಂದು ಒಂದೇ ಸಮನಾಗಿ ತನ್ನ ಮನಸ್ಸನ್ನು ಕಡೆಯುತ್ತಿದ್ದಳು. ಆದರೆ ಅದು ಎಷ್ಟು ಯೋಚಿಸಿದರೂ ಬಗೆಹರಿಯದು. ಚಿಂತಿಸಿ ಚಿಂತಿಸಿ ತಲೆ ಚಿಟ್ಟು ಹಿಡಿಯಿತೇ ಹೊರತು ಅದಕ್ಕೆ ಉತ್ತರ ಮಾತ್ರ ಸಿಗಲಿಲ್ಲ. ಗಳಿಗೆ ಗಳಿಗೆಯೂ ಮನಸ್ಸಿನ ಭಾರ ಹೆಚ್ಚಾಯಿತು. ಕೊನೆಗೆ ಇನ್ನು ಗಂಟೆಯಾಗಲು ಅರ್ಧ ಗಂಟೆಯಿರುವಾಗಲೇ ಉಪಾಧ್ಯಾಯರ ಅಪ್ಪಣೆ ಪಡೆದು ತರಗತಿಯಿಂದ ಹೊರ ಬಿದ್ದಳು. ಕ್ಲಾಸಿನ ಹೊರಗೇ ಮೀರಾ ಸಿಕ್ಕಿದಳು. ಆಗ ಪರಿಚಯ ಮಾಡಿ ಕೊಟ್ಟುಹೋದ ಮೇಲೆ ಅದುದೊಂದೂ ಮೀರಳಿಗೆ ತಿಳಿಯದು. ಆದುದರಿಂದ ನಗುತ್ತಲೇ ಅನುವಿನ ಕಡೆಗೆ ತಿರುಗಿ "ಆನಂದನೊಡನೆ ಮಾತು—" ಎಂದಳು. ಅನುವಿನ ಸಪ್ಪೆ ಮುಖ ಕಂಡು ಬೆಚ್ಚಿ ಮಾತನ್ನು ಮುಗಿಸಲೇ ಇಲ್ಲ.

"ಇದೇಕೆ ಅನು? ಮುಖ ಇಷ್ಟು ಸಪ್ಪಗಿದೆ? ಆತನೇನಾದರೂ ಅಂದ ನೇನೇ?" ಎಂದಳು.

ಮೀರಳಿಗೆ ಗೊತ್ತಿತ್ತು—ಆನಂದ ಎಲ್ಲರನ್ನು ಏನಾದರೂ ಅಂದೇ ತೀರುವನು. ಅನಸೂಯೆಯನ್ನು ಪರಿಚಯ ಮಾಡಿಕೊಡುವಾಗಲೇ ಹೆದರಿದ್ದಳು. ಅವಳನ್ನು ಏನಾದರೂ ಅನ್ನಬಹುದೆಂದು ಅನಸೂಯೆಯ ಸಪ್ಪೆಮುಖ ಕಂಡೊಡನೆ ಅದು ಖಂಡಿತವಾಯಿತು. ನಗುನಗುತ್ತಿದ್ದ ಹುಡುಗಿ ಅಳುಮೋರೆ ಹಾಕಿಕೊಳ್ಳಬೇಕಾದರೆ ಖಂಡಿತವಾಗಿಯೂ ಅವನು ಏನೋ ಆಡಬಾರದುದನ್ನು ಆಡಿರಲೇಬೇಕು ಎನಿಸಿತು.

ಅನುವಿಗೆ ಹೃದಯದ ದುಃಖವೆಲ್ಲಾ ಮರುಕಳಿಸಿ ಬಂತು. ತುಂಬಿ ತುಳುಕಿ ಬಂತು. ಕಣ್ಣಲ್ಲಿ ಹನಿಗೂಡಿತು.

"ಛೆ! ಇದಕ್ಕೆಲ್ಲ ಅಳುತ್ತಾರೆಯೇನೇ; ನಡಿನಡಿ. ಹುಡುಗರೆಲ್ಲಾ ನಮ್ಮ ಕಡೆಯೇ ನೋಡುತ್ತಾರೆ" ಎನ್ನುತ್ತಾ ಮೀರಾ ಅವಳನ್ನು ಕೊಠಡಿಯೊಳಕ್ಕೆ ಕರೆದುಕೊಂಡು ಹೋದಳು. ಅನು ಅಗ ಎಲ್ಲವನ್ನು ತಿಳಿಸಿದಳು ಮೀರಾ ಅದನ್ನು ಕೇಳಿ ನಕ್ಕಳು.

"ಅಯ್ಯೋ ಹುಚ್ಚಿ! ಇಷ್ಟೇನೇ! ಇಷ್ಟಕ್ಕೇ ಎಷ್ಟು ಪ್ರಮಾದವೇ? ಅವನ ವಿಷಯ ನಿನಗೇನೂ ತಿಳಿಯದು. ಆದುದರಿಂದಲೇ ನೀನು ಹೀಗೆ ನೊಂದುಕೊಂಡಿದ್ದೀಯೆ—ಅಷ್ಟೆ. ಇದು ವರೆಗೂ ಅವನು ಯಾರನ್ನಾದರೂ ಸೌಜನ್ಯದಿಂದ ಮಾತನಾಡಿಸಿದ್ದರೆ ಸರಿ. ಅವನೊಬ್ಬ Cynic ಕಣೇ. ಎಲ್ಲರನ್ನು ಬೈಯುತ್ತಾನೆ. ಎಲ್ಲರನ್ನು ತಾತ್ಸಾರದಿಂದ ಕಾಣುತ್ತಾನೆ. ಅಂತಹ ಮನುಷ್ಯ ಏನೋ ಅಂದ ಅಂತ ಅಳು—ಎಂದು ಅನುವನ್ನು ಸಮಾಧಾನ ಪಡಿಸಿದಳು ಅಷ್ಟು ಹೊತ್ತಿಗೆ ಪ್ರಭೆಯೂ ಬಂದಳು.

"ಆಗಲೇ ನಾನು ಹೇಳಿದೆ. ಆದರೂ ಕೇಳಲಿಲ್ಲ" ಎಂದಳು ಪ್ರಭಾ ಅನುವಿನ ಮನಸ್ಸಿಗೆ ಕೊಂಚ ಸಮಾಧಾನವಾಯಿತು. ಆದರೆ ಮೀರಳ ಸಮಾಧಾನದ ಮಾತಿನಿಂದ ಮತ್ತೊಂದು ಪರಿಣಾಮವಾಯಿತು ಆನಂದನ ಮೇಲೆ ಮೊದಲೇ ಅವಳಿಗೆ ಅವ್ಯಕ್ತ ಕೋಪವಾಗಿತ್ತು. ಈಗ ಆ ಕೋಪ ಇದ್ದಕ್ಕಿದ್ದಂತೆಯೇ ಬೆಳೆದು ರೂಪಿತವಾಗಿ ಬೇರೂರಿತು. ಆನಂದನೊಬ್ಬ ನಿರಸನಿ. ಹೆಂಗಸರನ್ನು ದ್ವೇಷಿಸುವವನು ಹೆಂಗಸರನ್ನು ತಾತ್ಸಾರದಿಂದ ಕಾಣುವವನು. ಆದುದರಿಂದ ಅವನು ತನ್ನ ಬಳಿ ಹಾಗೆ ಮಾತನಾಡಿದ. ತನ್ನನ್ನು ತುಚ್ಛವಾಗಿ ಕಡೆಗಾಣಿಸಲೆಂದು ಆ ದಿನ ಅವನು ಹಾಗಂದುದೆಂಬ ಭಾವನೆ ಅನುವಿನಲ್ಲಿ ದೃಢವಾಯಿತು. ಇದರಿಂದ ಆನಂದನೆಂದರೇ ಮೈಯುರಿಯುತ್ತಿತ್ತು. ಅಂದಿನ ಆ ಪರಿಚಯ, ಆ ಮಾತುಕತೆಯನ್ನೆಲ್ಲಾ ನೆನೆದರೆ ಅವಳ ಮನಸ್ಸು ಅಸ್ಥಿರವಾಗಿ ಮೈ ಜಲ್ಲೆನ್ನುತ್ತಿತ್ತು.

೬

ಆನಂದನಿಗೆ ಮತ್ತೆ ಕಾಲೇಜಿಗೆ ಹೋಗಲಾಗಲಿಲ್ಲ. ತನ್ನ ಮಾತೆಲ್ಲವನ್ನು ಮತ್ತೆ ಮತ್ತೆ ಹೇಳಿಕೊಳ್ಳುತ್ತಿದ್ದ. ತಾನಂದುದರಲ್ಲಿ ಏನಾದರೂ ತಪ್ಪಿದೆಯೇ ಎಂದು ತಿಣಿಕಿ ತಿಣಿಕಿ ನೋಡುತ್ತಿದ್ದ. ಎಷ್ಟೇ ಹುಡುಕಿದರೂ ಎಷ್ಟು ಯೋಚಿಸಿದರೂ ತನ್ನ ಮಾತಿನಲ್ಲಿ ಯಾವ ತಪ್ಪೂ ಕಾಣಲಿಲ್ಲ. ,ಅಷ್ಟೆ ಅಲ್ಲ—ಮಾತುಗಳೇ ಪೂರ್ಣವಾಗಿ ನೆನಪಿಗೆ ಬರುತ್ತಿರಲಿಲ್ಲ. ಯಾವುದೋ ಅವ್ಯಕ್ತನೋವು ಎದೆಯನ್ನು ತಿನ್ನುತ್ತಿತ್ತು. ಏನೋ ಕೊರತೆ—ತುಂಬುಕೊರತೆ. ಆ ನೋವು ಒಂದೊಂದು ಬಾರಿ ಬಹಳ ಮಧುರವಾಗಿ ತೋರುತ್ತಿತ್ತು. ತನ್ನ ಅಂದಿನ

ನಡವಳಿಕೆಯಲ್ಲೇನೋ ಕಳಂಕವಿದೆಯೆಂದು ಮನಸ್ಸು ಹೇಳುತ್ತಿತ್ತು. ಕಳಂಕವೇನೆಂದು ಹುಡುಕಿದರೆ ಮಾತ್ರ ತಿಳಿಯುತ್ತಿರಲಿಲ್ಲ. ತಪ್ಪೇನೂ ಇಲ್ಲವೆಂದುಕೊಂಡರೆ ಮತ್ತೆ ಶಂಕೆ–ಮತ್ತೆ ಸಂದೇಹ! ಇದನ್ನೆಲ್ಲಾ ಆದಷ್ಟು ಬೇಗನೆ ರಾಮುವಿಗೆ ತಿಳಿಸಬೇಕೆಂಬ ಉತ್ಸುಕತೆ. ಆದರೆ ಸಂಜೆಯವರೆಗೂ ಕಾಯಬೇಕು. ರಾಮುವಿನ ಮನೆಗೇ ಹೋಗಿ ಹೇಳಿಬರಲೇ ಎಂದು ಒಮ್ಮೊಮ್ಮೆ ಅನ್ನಿಸಿ ಕೂಡಲೆ ಎದ್ದು ಹೊರಟು ಅರ್ಧದಾರಿ ನಡೆದು ಮನಸ್ಸು ಬದಲಾಯಿಸಿ ಮನೆಗೆ ಹಿಂತಿರುಗಿದ್ದ. ಪುಸ್ತಕವನ್ನೋದಿಯೇ ಕಾಲ ಕಳೆಯೋಣವೆಂದರೆ ಒಂದೆರಡು ಪುಟ ಮಗುಚಿಹಾಕುವುದರಲ್ಲೇ ಬೇಸರ. ಪುಸ್ತಕ ತೆರೆದಂತೆ ತೆರೆದಿರುತ್ತಿತ್ತು. ಮನಸ್ಸು ಮಾತ್ರ ಬೇರೆಲ್ಲಿಯೋ ಓಡಿಹೋಗುತ್ತಿತ್ತು. ಮತ್ತೆ ಎದ್ದು ಶತಪಥ! ಕೋಣೆಯ ಈ ಪಕ್ಕದಿಂದ ಆ ಪಕ್ಕಕ್ಕೆ, ಆ ಪಕ್ಕದಿಂದ ಈ ಪಕ್ಕಕ್ಕೆ ಒಂದೇ ಸಮನಾಗಿ ಓಡಾಡುತ್ತಿದ್ದ. ಮನಸ್ಸು ಕಡಿವಾಣದ ಹಿಡಿತದಲ್ಲಿರುವ ಜೂಜಿನ ಕುದುರೆಯಂತೆ ಒಂದೇ ಸವನೆ ತಕಪಕ ಕುಣಿಯುತ್ತಿತ್ತು.

ಸಂಜೆ ರಾಮು ಬಂದಾಗ ಆನಂದನ ಮುಖ ಇದ್ದುದೂ ಕಳೆಗುಂದಿತ್ತು. ರಾಮುವಿಗೆ ತಕ್ಷಣವೇ ಗೊತ್ತಾಗಿ ಹೋಯಿತು. ಏನೋ ಆಗಿದೆ; ಸುಮಾರು ಭಾವನೊಂದಿಗೆ ಬಿರುಸು ಮಾತಾಗಿರಬಹುದೆಂದುಕೊಂಡ. ಆದರೆ ತಾನಾಗಿಯೇ ಕೆಣಕಿ ಕೇಳಬಾರದೆಂದು ಸುಮ್ಮನಿದ್ದ. ಆನಂದ ಮಾತಿಲ್ಲದೆ ಅವನೊಂದಿಗೆ ಹೊರಟ.

ಆನಂದನಿಗೆ ಇಷ್ಟು ಹೊತ್ತು ಯೋಚಿಸಿದ್ದುದೆಲ್ಲಾ ಹಾರಿ ಹೋದಂತಾಗಿತ್ತು. ರಾಮುವಿಗೆ ಹೀಗೆ ಹೇಳುತ್ತೇನೆ, ಹಾಗೆ ಹೇಳುತ್ತೇನೆ ಎಂದೆಲ್ಲಾ ಯೋಚಿಸಿಟ್ಟುಕೊಂಡಿದ್ದುದು ಮರೆತೇ ಹೋಯಿತು ಹೇಳಲು ತವಕ—ಆದಷ್ಟು ಬೇಗ ರಾಮುವಿಗೆ ತಿಳಿಸಿ ಅವನ ಅಭಿಪ್ರಾಯ ಪಡೆಯುವ ಉತ್ಸುಕತೆ. ಆದರೆ ಆರಂಭಿಸುವುದು ಹೇಗೆಂಬುದೇ ದೊಡ್ಡ ಸಮಸ್ಯೆ. ಮನಸ್ಸಿನಲ್ಲಿಯೇ ಅದನ್ನು ತಿರುವಿಹಾಕುತ್ತಾ ತಲೆ ತಗ್ಗಿಸಿಕೊಂಡೇ ನಡೆದ. ರಾಮು ನಗುನಗುತ್ತಲೇ ಅವನ ಈ ಪೇಚಾಟ ನೋಡುತ್ತಿದ್ದ. ಅಷ್ಟು ದೂರ ಹೀಗೆಯೇ ಹೋದಮೇಲೆ ರಾಮುವಿಗೆ ಆನಂದನಮೇಲೆ ಕನಿಕರಬಂತು.

ಏನೋ ಯೋಚನೆ ಅವನನ್ನು ಕಿತ್ತು ತಿನ್ನುತ್ತಿದೆ; ಏನೋ ತಿಳಿದು ಬಿಡೋಣವೆಂದು ತಾನೇ ಆನಂದನನ್ನು ಕೇಳಿದ.

"ಯಾಕೋ ಆನಂದ, ಇವತ್ತು ಬಹಳ ಸಪ್ಪಗಿದ್ದೀಯಲ್ಲಾ—ಏನು ಸಮಾಚಾರ?" ಆನಂದನಿಗೆ ಕತ್ತಿಗೆ ಬಿಗಿದುಬಂತು. ಇಷ್ಟು ಹೊತ್ತು ಹೇಳಬೇಕೆಂದಿದ್ದ ತವಕ ಈಗೆಲ್ಲಿಯೋ ಮಾಯವಾಯಿತು ಅವನಿಗೆ ಇದನ್ನೆಲ್ಲಾ ತಿಳಿಸಿದರೆ ಅವನೇನೆಂದಾನೋ ಎಂಬ ಹೆದರಿಕೆ ಬೇರೆ. ಆದರೆ ಮನಸ್ಸಿನ ಒತ್ತಡ ತಡೆಯಲಾರದಾಯಿತು. ಕೊನೆಗೆ ಎಲ್ಲವನ್ನೂ ಚಾಚೂತಪ್ಪದೆ ರಾಮುವಿಗೆ ತಿಳಿಸಿದ.

ರಾಮು ಅವನ ಮಾತನ್ನೆಲ್ಲಾ ಸಾವಧಾನವಾಗಿ ಕೇಳಿದ. ಮನಸ್ಸಿನಲ್ಲೇನೆಂದುಕೊಂಡನೋ ಮುಖದಮೇಲೆ ಮಾತ್ರ ಚಿಂತೆಯ ನೆರಳೊಮ್ಮೆ ಮೂಡಿ ಮಿಣುಕಿ ಮಾಯವಾಯಿತು.

"ಅಯ್ಯೋ ಹುಚ್ಚುಹುಡುಗ, ಇದಕ್ಕೆಲ್ಲಾ ಒದ್ದಾಡುತ್ತಾರೇನೋ? ಇಷ್ಟಕ್ಕೇ ಮುಖ ಸಪ್ಪೆಮಾಡಿಕೊಂಡು ಪ್ರಪಂಚವೇ ಮುಳುಗಿ ಹೋಯಿತೂಂತ ಅಳು. ನಿನಗೆ ಮನಸ್ಸಿಗೇನೋ ಕಸಿವಿಸಿಯಾಗಿತ್ತು. ಆದುದರಿಂದ ಏನೋ ಅಂದು ಬಿಟ್ಟೆ; ಅದಕ್ಕೇನೀಗ? ಏನು ಕೊಳ್ಳೆ ಹೋಯಿತು? ನಾಳೆ ಕಾಲೇಜಿಗೆ ಹೋದಾಗ ಆಕೆಯನ್ನು ಕಂಡು ನಾನೇನೋ ಅಂದುಬಿಟ್ಟೆ, ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಳ್ಳಬೇಡಿರೆಂದು ಕೇಳಿದರಾಯಿತು. ಅದು ಬಿಟ್ಟು ಹೀಗೆ ಮಂಕಾಗಿ ಮೂಲೆಯಲ್ಲಿ ಮುದುರಿಕೊಂಡರೇನಾದ ಹಾಗಾಯಿತು? ನಡಿನಡಿ—ಸಿನಿಮಾಕ್ಕೆ ಹೋಗೋಣ" ಎಂದ.

ರಾಮುವಿನ ಮಾತಿನಿಂದ ಆನಂದನಿಗೇನೋ ಕೊಂಚ ಸಮಾಧಾನವೆನಿಸಿದರೂ ಮನಸ್ಸಿನ ತೂಕವಿನ್ನೂ ಸರಿಹೋಗಲಿಲ್ಲ. ತಾನೇನೂ ಮಹಾ ಅಪರಾಧ ಮಾಡಿಲ್ಲವೆಂದು ತುಸು ಧೈರ್ಯ ತಾಳಿದ. ಆದರೂ ಅನುಮಾನ ಸಂದೇಹ, ಶಂಕೆ! ಹೇಗೋ ಏನೋ ಎಂಬ ಕಾತರ. ಇಷ್ಟಾದರೂ ಆ ದಿನದ ಪ್ರಥಮ ಪರಿಚಯವನ್ನು ನೆನೆದಾಗಲೆಲ್ಲ ಮೈಯೆಲ್ಲಾ ಪುಲಕಗೊಳ್ಳುತ್ತಿತ್ತು. ಹೃದಯದಲ್ಲಿ ಯಾವುದೋ ಒಂದು ಬಗೆಯ ಮಧುರವಾದ ನೋವು ತೋರುತ್ತಿತ್ತು.

ರಾಮುವಾಗಲೇ ಮನಸ್ಸಿನಲ್ಲಿಯೇ ಗುಣಾಕಾರ ಹಾಕಿದ್ದ. ಆನಂದ ಹೇಳಿದ ರೀತಿಯಲ್ಲೇ ಒಂದು ಹೊಸತನ ತೋರಿಬಂದಿತ್ತು. ಜತೆಗೆ ಅವನು ಹೇಳಿದ ಮಾತುಗಳು ಮೊದಲಬಾರಿಗೆ ಆಕೆಯನ್ನು ಕಂಡಾಗ ತನಗಾದ ಭಾವ ಪರಿಣಾಮವನ್ನು ಆನಂದ ತಿಳಿಸಿದುದರಿಂದಲೇ ಅವನು ಕೊಂಚ ಅನುಮಾನ ಪಟ್ಟ. ಆದರೆ ಮೊಟ್ಟಮೊದಲಿನಲ್ಲಿಯೇ ಆರಂಭದಲ್ಲಿಯೇ ಈ ಬಗೆಯಾದುದು ಅವನಿಗೆ ಕೊಂಚ ಅಸಮಾಧಾನ. ಮುಂದೆ ಇದು ಹೇಗೆ ಬೆಳೆದೀತೋ ಹೇಗೆ ಕೊನೆಗಾಣುವುದೋ ಎಂದೇ ಅವನ ಚಿಂತೆ. ಆನಂದನಿಗೇನೋ ಆಕೆಯಲ್ಲಿ ಮೊದಲಭೇಟಿಗೇ ಪ್ರೇಮವಾಗಿತ್ತು. ಅದರಲ್ಲಿ ಸಂದೇಹವೇ ಇರಲಿಲ್ಲ. ಆದರೆ ಆಕೆಗೆ ಇವನಲ್ಲಿ ಮೊದಲಭೇಟಿಗೇ ದ್ವೇಷವಾಗಿದ್ದರೆ ಆನಂದನ ಭವಿಷ್ಯಕ್ಕೆ ಇದು ಒಳ್ಳೆಯದಲ್ಲವೆಂದು ರಾಮು ತುಟಿ ಕಚ್ಚಿಕೊಂಡ.

ಚಿತ್ರಕ್ಕಿನ್ನೂ ಬಹಳ ಹೊತ್ತಿದ್ದುದರಿಂದ ಇಬ್ಬರೂ ತಿಂಡಿತಿಂದು ಬರಲು ಹೋಟಲಿನೊಳಕ್ಕೆ ಹೋದರು. ಏನು ತಿಂಡಿ ತರಿಸಲೆಂದು ರಾಮು ಮೂರು ನಾಲ್ಕು ಬಾರಿ ಕೇಳಿದರೂ ತನ್ನ ಯೋಚನೆಯಲ್ಲೇ ಮುಳುಗಿದ್ದ. ಆನಂದ ಉತ್ತರವನ್ನೇ ಕೊಡಲಿಲ್ಲ. ಕೊನೆಗೆ ಏನೋ ತಿಂಡಿ ತರಿಸಿದ. ಇಬ್ಬರೂ ಪರ ವಶರಾಗಿ ತಿಂದರು. ಕಾಫಿಯನ್ನು ಕುಡಿದರು.

"ಕಾಫಿ ಚೆನ್ನಾಗಿಲ್ಲ ಅಲ್ಲವೇನೋ" ಎಂದ ರಾಮು.

ಆನಂದನಿಗೆ ಅವನ ಮಾತು ಕೇಳಿಸಿತೋ ಇಲ್ಲವೋ ಅಂತೂ ಅವನೂ ಉತ್ತರ ಕೊಟ್ಟ.

"ಹಾಗಾದರೆ ಸರಿ; ನೀನು ಹೇಳಿದಂತೆಯೇ ಮಾಡುತ್ತೇನೆ."

"ಏನು" ಎಂದ ರಾಮು.

"ಆದರೆ ಆಕೆಯನ್ನು ಕ್ಷಮಿಸೆಂದು ಕೇಳುವುದು ಹೇಗೋ ರಾಮು? ಎಂದ ಆನಂದ.

ರಾಮುವಿಗೆ ನಗು ಬಂತು. ಆದರೆ ಆನಂದ ನೊಂದುಕೊಳ್ಳುವನೆಂದ ಅದನ್ನು ಹಾಗೆಯೇ ತಡೆದುಕೊಂಡ.

"ನಾಳೆಯೋ ನಾಡಿದ್ದೋ ಆಕೆಯನ್ನು ನೋಡಿ ಕೇಳಿದರಾಯಿತ. ಅಷ್ಟೆ" ಎಂದ.

ಆನಂದ ಒಂದೆರಡು ನಿಮಿಷ ಮಾತಾಡಲಿಲ್ಲ. ಆ ಮೇಲೆ ತಲೆಯೆತ್ತಿ ರಾಮುವಿನ ಕಡೆಗೆ ತಿರುಗಿದ.

"ಆದರೆ ನಾಳೆ ನಾಡಿದ್ದು ಆಕೆ ಸಿಗುವುದಿಲ್ಲವಲ್ಲೋ." ಎಂದ.

"ಯಾಕೆ?"

"ನಾಳೆ ಶನಿವಾರ; ಕಾಲೇಜಿಲ್ಲ. ಇನ್ನು ಸೋಮವಾರವೇ ಕಾಲೇಜು;"

"ಹಾಗಾದರೆ ಸೋಮವಾರವೇ ಕೇಳು. ಅಷ್ಟರಲ್ಲೇನು ನಷ್ಟ?"

ಹೋಟಲಿನವನಿಗೆ ಹಣಕೊಟ್ಟು ಇಬ್ಬರೂ ಹೊರಬಂದರು. ಚಿತ್ರ ಆರಂಭವಾಗಲಿನ್ನೂ ಇಪ್ಪತ್ತು ನಿಮಿಷವಿತ್ತು. ಚಿತ್ರಮಂದಿರದ ಹತ್ತಿರ ಹೋಗಿ ಟಿಕೇಟು ತೆಗೆದುಕೊಂಡು ಒಳಕ್ಕೆ ಹೋಗುವ ವೇಳೆಗೆ ಸರಿಯಾಗುವದೆಂದು ಆ ಕಡೆ ಹೊರಟರು.

"ಮೈಸೂರು ಪತ್ರಿಕೆ, ಮೂರೇ ಕಾಸು - ಮೈಸೂರು ಪತ್ರಿಕೆ. ಬೊಂಬಾಯಿಯಲ್ಲಿ ಕಾಂಗ್ರೆಸ್ ಸಭೆ! ಎ. ಐ. ಸಿ. ಸಿ ಸಭೆ! ಗಾಂಧೀಜಿಯ ಭಾಷಣ— ಮೂರೇ ಕಾಸು. ಸಾಧ್ವಿ ಪತ್ರಿಕೆ. ರಷ್ಯದಲ್ಲಿ ಜರ್ಮನರ ಹಿಂದೋಟ— ಮೂರೇ ಕಾಸು."

ಕೂಗಿಕೊಳ್ಳುತ್ತಿದ್ದ ಪತ್ರಿಕೆ ಮಾರುವ ಹುಡುಗನನ್ನು ಕರೆದು ರಾಮು ಒಂದು ಪ್ರತಿ ಕೊಂಡುಕೊಂಡ. ಮುಖ ಮೊದಲಿಗಿಂತಲೂ ತುಸು ಗಂಭೀರವಾಯಿತು. ಆನಂದ ಮಾತ್ರ ಇದಾವುದರ ಪರಿವೆಯೂ ಇಲ್ಲದೆ ತನ್ನ ಯೋಚನೆಯ ಕಡಲಿನಲ್ಲಿ ಸಾಗಿ ಹೋಗುತ್ತಿದ್ದ.

"ಆನಂದ, ಈದಿನ ಏಳನೆಯ ತಾರೀಕು. ಬೊಂಬಾಯಿಯಲ್ಲಿ ಎ. ಐ. ಸಿ ಸಿ ಸಭೆ ಸೇರಿದೆ. ಭಾರತದ ಭವಿಷ್ಯ ಏನಾಗುವದೋ" ಎಂದ ರಾಮು.

"ಉಂ? ಏನಂದೆ ರಾಮು?" ಎಂದು ಆನಂದ ಎಚ್ಚತ್ತ.

"ಭಾರತದ ಭವಿಷ್ಯ ಕಾಂಗ್ರೆಸಿನ ಕೈಯಲ್ಲಿದೆ. ಕಾಂಗ್ರೆಸ್ ಯಾವ ನೀತಿಯನ್ನನುಸರಿಸುವುದೋ ನೋಡಬೇಕು. ವರ್ಧಾದಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯೇನೋ ಸತ್ಯಾಗ್ರಹದ ನಿರ್ಣಯಮಾಡಿದೆ. ಆದರೆ ಅದಕ್ಕೆ ಮೊದಲು ಗಾಂಧೀಜಿ ವೈಸ್‌ರಾಯರನ್ನು ಜಿನ್ನಾ ಸಾಹೇಬರನ್ನು ಭೇಟಿಮಾಡುವರು. ವೈಸ್‌ರಾಯ್ ಏನು ಮಾಡುವನೋ ನೋಡಬೇಕು. ಸರ್ಕಾರದ ತಂತ್ರವೇನೋ ಯಾರಿಗೆ ಗೊತ್ತು? ಗಾಂಧೀಜಿಯನ್ನೇನಾದರೂ ಬಂಧಿಸಿದರೆ?"

" ಇಲ್ಲವೋ—ಅದು ಸಾಧ್ಯವಿಲ್ಲ—ಅವರಿಗೆಷ್ಟು ವಯಸ್ಸಾಗಿದೆ—ಅವರನ್ನು ಬಂಧಿಸಲಾರದು ಸರ್ಕಾರ ?

" ನಿನಗೆ ಗೊತ್ತಿಲ್ಲ ಆನಂದ—ಬರಿಯ ತನ್ನ ಸೈನಿಕಬಲದ ಪಾಶವೀ ಶಕ್ತಿಯಿಂದಲೇ ಜನತೆಯನ್ನು ಮೆಟ್ಟಿ, ಕಾಲಿನಡಿಯಲ್ಲಿ ಉರುಳಿಸಿ ಶೋಷಿಸುವ ಸರ್ಕಾರ ಯಾವುದಕ್ಕೂ ಹಿಂಜರಿಯುವುದಿಲ್ಲ. ತನಗೆ ಕೊನೆ ಬಂದಿದೆ. ತನ್ನ ಉಳಿವಿಗೇ ಸಂಚಕಾರ ಬಂದೊದಗಿದೆಯೆಂದು ತಿಳಿದರೆ ಸಾಕು—ಏನು ಮಾಡಲೂ ಹೇಸುವುದಿಲ್ಲ. ರಕ್ತ ಕೋಡಿಕೋಡಿಯಾಗಿ ಗಂಗೆ ಯಮುನೆಯಲ್ಲಿ ಸೇರಿಕೊಳ್ಳಲಿ. ಹೆಣಗಳು ರಾಸಿರಾಸಿಯಾಗಿ ಒಟ್ಟಲಿ—ಚಿಂತೆಯಿಲ್ಲ—ತಾನುಳಿದರೆ ಸಾಕೆನ್ನುತ್ತದೆ. ಸಾಮ್ರಾಜ್ಯಶಾಹಿ. "

" ಹಾಗಾದರೆ—"

" ಹೌದು ಆನಂದ—ಈ ಪಾಶವೀಶಕ್ತಿಯನ್ನೆದುರಿಸಲು ನಮ್ಮ ಜನಕ್ಕೆ ನೈತಿಕ ಶಕ್ತಿಯಾಗಲೀ ದೈಹಿಕ ಶಕ್ತಿಯಾಗಲೀ ಇಲ್ಲ. " ಅಡಿಯ ಮುಂದಿಡೆ ಸ್ವರ್ಗ " ಎಂದು ಬಾಯಲ್ಲಿ ಊದುವವರು ಕೋಟಿ ಮಂದಿ. ಆದರೆ ನಡೆಯುವವರೇನು ನೂರುಮಂದಿ ಸಿಕ್ಕರೆ ಅದೇ ಭಾಗ್ಯ ! "

ಆನಂದ ಮನಸ್ಸಿನಲ್ಲಿಯೇ ಏನೋ ಎಣಿಕೆ ಹಾಕುತ್ತಿದ್ದವನು ಮಾತಾಡಲಿಲ್ಲ. ರಾಮು ಮಾತು ಮುಂದುವರಿಸಿದ.

"ಮುಷ್ಕರ, ಸತ್ಯಾಗ್ರಹ, ಚಳುವಳಿಗಳನ್ನು ನಡೆಸಲಾರದೆಂದು ತೋರುತ್ತದೆ. ಗಾಂಧೀಜಿಯೂ ಹಾಗೇ ಹೇಳಿದ್ದಾರೆ. ಆದರೆ ಮುಂದೆ ಹೇಗಾದೀತೋ ನೋಡೋಣ. "

ಕೊಂಚಕಾಲ ಇಬ್ಬರೂ ಮೌನವಾಗಿಯೇ ನಡೆದರು. ರಾಮು ಹೋಗಿ ಹಣಕೊಟ್ಟು ಟಿಕೀಟ್ ತೆಗೆದುಕೊಂಡು ಬಂದ. ಆನಂದ ಮರುಮಾತಿಲ್ಲದೆ ಅವನೊಂದಿಗೆ ಚಿತ್ರಮಂದಿರದೊಳಕ್ಕೆ ನಡೆದ ರಾಮುವಾಗಲೇ ಶಾಂತಚಿತ್ತನಾಗಿದ್ದ. ಆದರೆ ಆನಂದನಿನ್ನೂ ಉದ್ರೇಕದಿಂದ ಇಳಿದಿರಲಿಲ್ಲ. ರಾಮು ತನ್ನಂತೆ ತಾನು ಚಿತ್ರ ನೋಡುವುದರಲ್ಲಿಯೇ ಮಗ್ನನಾಗಿದ್ದವನು, ಆನಂದನ ಕಡೆಗೆ ಒಂದು ಬಾರಿಯಾದರೂ ತಿರುಗಿ ನೋಡಲಿಲ್ಲ. ಆದರೆ ಆನಂದ ಮಾತ್ರ ಒಂದೇ ಸಮನಾಗಿ ಒದ್ದಾಡುತ್ತಿದ್ದ. ಕುರ್ಚಿಯಮೇಲೆ ಒಮ್ಮೆ ಹೀಗೆ ಕುಳಿತು

ಕೊಳ್ಳುವನು, ಮರುನಿಮಿಷವೇ ಹಾಗೆ ಕುಳಿತುಕೊಳ್ಳುವನು. ಆದರೆ ಯಾವು ದರಿಂದಲೂ ಮನಸ್ಸು ಸಮಾಧಾನವಾಗಲಿಲ್ಲ. ವಿಚಾರಗಳು— ವಿಚಾರಗಳು— ತೆರೆಯಮೇಲಿನ ನೆರಳುಗಳಂತೆ ತಲೆಯಲ್ಲಿ ಸುಳಿಯುತ್ತಿದ್ದುವು. ಇದಾವುದನ್ನೂ ಗಮನಿಸದೆ ಚಿತ್ರ ತೆರೆಯಮೇಲೆ ಓಡುತ್ತಿತ್ತು. ಹೊರಗಿನಿಂದ ಗಾಳಿ ಕಿಟಕಿಯ ಮೂಲಕ "ಸುಯ್ಯೊಂ" ಎಂದು ಬೀಸುತ್ತಿತ್ತು.

೭

ಆನಂದ ಹಾಸಿಗೆಯ ಮೇಲೆ ಕಣ್ತೆರೆದು ಹಾಗೆಯೇ ಮಲಗಿದ್ದ. ಏಕೋ ಅಂದು ಹಾಸಿಗೆ ಬಿಟ್ಟೇಳಲು ಮನಸ್ಸೇ ಬರಲಿಲ್ಲ. ಹಗಲಿನ ತಂಗಾಳಿ ತೂರಿ ಬಂದು ಮೈಯನ್ನು ಮುತ್ತಿಡುತ್ತಿತ್ತು. ರಾತ್ರಿ ಚೆನ್ನಾಗಿ ನಿದ್ರೆ ಬಂದಿದ್ದು ದರಿಂದ ಮನಸ್ಸು ಆಹ್ಲಾದವಾಗಿ ಅರಳಿತ್ತು. ಕಿಟಕಿಯಿಂದ ಹೊರಗೆ ತೆಂಗಿನ ಗರಿಗಳ ಮೇಲೆ ಎಳೆ ಸೂರ್ಯನ ಹೊಂಬಿಸಿಲು ಜೋಕಾಲಿಯಾಡುತ್ತಿದ್ದುದು ಕಾಣುತ್ತಿತ್ತು ಹಕ್ಕಿಗಳು ಒಂದೊಂದೇ ಹಾರಿ ಹೋಗುತ್ತಿದ್ದವು. ದೂರ ದಿಂದ ಯಾವುದೋ ಹೆಣ್ಣುಮಗಳು ಉದಯರಾಗ ಹಾಡುತ್ತಿದ್ದಳು. ನಿತ್ಯವೂ ಅದೇ ಹಾಡನ್ನು ಕೇಳುತ್ತಿದ್ದರೂ ಆನಂದನಿಗೆ ಇಂದು ಅದರಲ್ಲಿ ಯಾವುದೋ ಹೊಸ ಮಾಧುರ್ಯ ತೋರಿ ಬಂದಿತು. ಆನಂದನ ಹೃದಯ ಒಡನೆಯೇ ಕಲ್ಪನೆಗೆ ಹಾರಿತು. ಕಲ್ಪನೆಯಲ್ಲಿ ಯಾರೊಂದಿಗೋ— ಆ ವ್ಯಕ್ತಿ ಅಸ್ಪಷ್ಟವಾಗಿ ಮಸಕು ಮಸಕಾಗಿತ್ತು—ಮಾತಾಡುತ್ತಿದ್ದ. ಆ ಹೃದಯದ ಏಕಾಂತ ಸಂಗೀತದ ಮಧ್ಯೆ ಇದ್ದಕ್ಕಿದ್ದಂತೆ ರಾಮುವಿನ ದನಿ ಕೇಳಿತು ಕಲ್ಪನೆಯ ವೀಣೆಯ ತಂತಿಗಳು ನುಚ್ಚುನೂರಾಗಿ ಆನಂದ ನೈಜ ಜಗತ್ತಿಗೆ ಇಳಿದ. ನಿಜವಾಗಿಯೂ ರಾಮು ಹೊರಗೆ ನಿಂತು ಕೂಗುತ್ತಿದ್ದ.

ಎಂದೂ ಇಲ್ಲದುದು ಇಂದು ಬೆಳಗ್ಗೆ ಇಷ್ಟು ಬೇಗನೆ ಬಂದಿರುವನಲ್ಲಾ ಎಂದು ಗಾಬರಿಗೊಂಡ. ಭಾನುವಾರ ಸುಮ್ಮನೆ ಬಂದಿರಬಹುದು ಎಂದು ಸಮಾಧಾನಪಟ್ಟುಕೊಂಡು ಬಾಗಿಲು ತೆರೆದ. ಆದರೆ ರಾಮುವಿನ ಮುಖ ವಿವರ್ಣವಾಗಿತ್ತು. ಉಸಿರು ಏದುತ್ತಿತ್ತು. ತುಟಿಯಲುಗಿದರೂ ಮಾತೇ ಹೊರಡುತ್ತಿರಲಿಲ್ಲ. ಆನಂದನಿಗಂತೂ ಏನೂ ಗೊತ್ತಾಗಲಿಲ್ಲ. ಏನೂ ತೋಚಲಿಲ್ಲ.

"ಆನಂದ! ಗಾಂಧೀಜಿಯನ್ನು ಬಂಧಿಸಿದರು. ನೆಹ್ರೂ, ಆಜಾದ ಎಲ್ಲರನ್ನೂ ಹಿಡಿದರು. ಕಾಂಗ್ರೆಸ್ ಅಕ್ರಮಕೂಟ!" ಎಂದ ರಾಮು ಬಹಳ ಪ್ರಯಾಸದಿಂದ.

ಆನಂದನಿಗೆ ಸಿಡಿಲೆರಗಿದಂತಾಯಿತು. ತಾವೆಲ್ಲಾ ಆಗಲಾರದು ಎಂದಿದ್ದುದೇ ಆಗಿ ಹೋಗಿತ್ತು. ನಾಯಕರೆಲ್ಲಾ ಸತ್ಯಾಗ್ರಹಕ್ಕೆ ಮೊದಲೇ ಸೆರೆಯಾಳಾದರೆ— ನಾಡಿನ ಗತಿಯೇನು—ಮುಂದೇನು? ಮುಂದೇನು?

ಆನಂದ ರಾಮು ಇಬ್ಬರೂ ಸಂಜೆಯ ವರೆಗೂ ಅಡ್ಡಾಡಿದರು. ಹಲ ವಾರು ಕಾಂಗ್ರೆಸ್ ನಾಯಕರನ್ನು ಕಂಡು ಮಾತನಾಡಿದರು. ಸಂಜೆಗೆ ವಿದ್ಯಾರ್ಥಿಗಳ ಸಭೆ ಸೇರಿ ನಾಡಿನ ನಾಯಕರ ಬಂಧನವನ್ನು ವಿರೋಧಿಸಲು ಚಳುವಳಿ ಹೂಡಬೇಕೆಂದು ತೀರ್ಮಾನಿಸಿತು. ವಿಶ್ವವಿದ್ಯಾನಿಲಯಸಂಘದ ಕಾರ್ಯದರ್ಶಿಯಾಗಿದ್ದ ಆನಂದನ ಸಹಪಾಠಿಯೇ ನಾಯಕನಾದ. ಆನಂದ ನಿಗೆ ಯಾವುದೋ ಒಂದು ಆಸಕ್ತಿ ಬೇಕಾಗಿತ್ತು. ತನ್ನ ಕಾಲವನ್ನೆಲ್ಲಾ ಯಾವುದಕ್ಕಾದರೂ ಮೀಸಲಾಗಿಡಲೆಂದು ಕಾದಿದ್ದ. ಅದಕ್ಕೆ ಸರಿಯಾಗಿ ಒತ್ತಾಸೆಯಾಗಿ ಅವನ ರಾಷ್ಟ್ರೀಯ ಮನೋಭಾವನೆಯೂ ಕೂಡಿತ್ತು. ಆದು ದರಿಂದ ವಿದ್ಯಾರ್ಥಿ ಚಳುವಳಿಯಲ್ಲಿ ನಾಯಕನಿಗೆ ಬಲವಾಗಿ ನಿಂತು ಯಾವ ಕೆಲಸಕ್ಕಾದರೂ ಮುಂದಾಗಿ ಬಂದು ಕೆಲಸ ನಿರ್ವಹಿಸುತ್ತಿದ್ದ. ಎಷ್ಟೇ ಕಷ್ಟ ಬಂದರೂ ಒಂದು ಬಾರಿಯಾದರೂ ಗೊಣಗದೆ, ತುಟಿ ಪಿಟ್ಟೆನ್ನದೆ ಹಿಂಜರಿಯದೆ ಕೆಲಸ ಸಾಧಿಸಿಯೇ ತೀರುತ್ತಿದ್ದ. ಇದರಿಂದ ಎಲ್ಲರಿಗೂ ಅವನಲ್ಲಿ ನಂಬುಗೆ. ನಾಯಕ ಯಾವುದಾದರೂ ಅಗತ್ಯದ ಕೆಲಸವಿದ್ದರೆ ಆನಂದನಿಗೆ ಅದರ ಜವಾಬ್ದಾರಿ ವಹಿಸುತ್ತಿದ್ದ. ಹೀಗಾಗಿ ವಿದ್ಯಾರ್ಥಿಗಳು ಆನಂದನನ್ನೂ ನಾಯಕನನ್ನೂ "ಎರಡು ದೇಹ; ಒಂದು ಆತ್ಮ" ಎನ್ನುತ್ತಿದ್ದರು. ವಿದಾರ್ಥಿ ಗಳೆಲ್ಲ ಅವನಿಗೆ ಕೊಡುತ್ತಿದ್ದ ಗೌರವ, ಅವನಲ್ಲಿ ತೋರುತ್ತಿದ್ದ ವಿಶ್ವಾಸಗಳಿಂದ ಆನಂದನ ಮನಸ್ಸಿನಲ್ಲೂ ಒಂದು ಬಗೆಯ ಸಮಾಧಾನ, ಸಂತೋಷ ಮೂಡಿತ್ತು. ಹಳೆಯ ನಿರಸನವಾದ ತೊಟ್ಟು ಕಳಚಿ ಉರುಳಿತು. ಆದರೆ ಈಗ ಯಾವಾಗಲೂ ಕೈತುಂಬಾ ಕೆಲಸವಿರುತ್ತಿತ್ತು. ದುಡಿಯಲು ಇರುವ ಕಾಲ ಸಾಲದೇ ಹೋದಾಗ ಇನ್ನು ಚಿಂತೆಗೆ ಅವಕಾಶವಾದರೂ ಎಲ್ಲಿ?

ಅನಸೂಯಾ ಕೂಡ ಮುಷ್ಕರದಲ್ಲಿ ಭಾಗ ವಹಿಸಿದಳು. ಅಷ್ಟೊಂದು ಧೈರ್ಯದಿಂದಾಗಲೀ ತ್ಯಾಗದಿಂದಾಗಲೀ ವರ್ತಿಸದಿದ್ದರೂ ಸಾಕಷ್ಟು ಕೆಲಸ ಮಾಡಿದಳು. ಹಣ ಕೂಡಿಸುವುದರಲ್ಲಿ, ಮೆರವಣಿಗೆಯಲ್ಲಿ ಹೆಂಗಸರ ಸಂಗಡ ನಲ್ಲಿ ಮುಂದಾಗಿ ಬರುತ್ತಿದ್ದವರೆಂದರೆ ಮೀರಾ, ಪ್ರಭಾ, ಮತ್ತು ಅನಸೂಯಾ. ಆನಂದನಲ್ಲಾದ ಬದಲಾವಣೆ ಕಂಡು ಮೀರಳಿಗೇನೋ ಬಹಳ ಸಂತೋಷ ವಾಗಿತ್ತು. ಆದರೆ ಅದನ್ನು ಅನಸೂಯಳಿಗೆ ಹೇಳಲು ಆಗ ಅವಳಿಗೆ ಸಮಯ ಸಿಗುತ್ತಿರಲಿಲ್ಲ. ಆಗಾಗ ಅವರೆಲ್ಲಾ ಸಲಹೆ ತೆಗೆದುಕೊಳ್ಳಲು ನಾಯಕನ ಬಳಿಗೆ ಬರುತ್ತಿದ್ದರು. ಆಗ ಆನಂದನೇ ಸಾಮಾನ್ಯವಾಗಿ ಅವರೊಂದಿಗೆ ಚರ್ಚೆ ನಡೆಸಿ ಸಲಹೆ ಕೊಡುತ್ತಿದ್ದವನು. ಇದುವರೆಗೂ ಆವನ ಬುದ್ಧಿಶಕ್ತಿಯ ವಿಚಾರವಾಗಿ ಮೀರಳಿಗೆ ಇದ್ದ ಕೀಳು ಅಭಿಪ್ರಾಯ ವೆಲ್ಲಾ ಈಗ ಮಾಯವಾಗಿ ಹೋಯಿತು. ಆದರೆ ಅನಸೂಯಾಳಿಗೆ ಮಾತ್ರ ಅವನನ್ನು ಮೊದಲಬಾರಿ ಭೇಟಿ ಮಾಡಿದ ದಿನದ ಘಟನೆ ಒಡನೆಯೇ ನೆನಪಾಗಿ ಮೈ ಜಿಲ್ಲೆನ್ನುತ್ತಿತ್ತು. ಚಣಕಾಲ ಮೈ ನಡುಗುತ್ತಿತ್ತು !

ವಿದ್ಯಾರ್ಥಿಗಳೇನೋ ಮುಷ್ಕರ ಹೂಡಿಬಿಟ್ಟರು. ನೂರಕ್ಕೆ ೯೦—೯೫ ರಷ್ಟು ಮಂದಿ ಶಾಲಾ ಕಾಲೇಜು ಬಿಟ್ಟು ಬಂದಿದ್ದರು. ಶಾಲಾ ಕಾಲೇಜು ಗಳಿಗೆ ಚಿರಕಾಲ ಬಹಿಷ್ಕಾರ ಹಾಕುವ ಯೋಚನೆ ಎಲ್ಲರಿಗೂ. ಬರಿಯ ಭಾಷಣ ಮೆರವಣಿಗೆಗಳಲ್ಲಿಯೇ ಮುಷ್ಕರವನ್ನು ಮುಗಿಸಲು ಯಾರಿಗೂ ಮನಸ್ಸಿರಲಿಲ್ಲ. ನಾಡಿನ ಸೇವೆಗಾಗಿ ಏನಾದರೂ ಮಾಡಬೇಕು, ನಾವೂ ತ್ಯಾಗಮಾಡಬೇಕು, ಕಷ್ಟ ಸಹಿಸಬೇಕೆನ್ನುವ ಉತ್ಸಾಹ ವಿದ್ಯಾರ್ಥಿಗಳಲ್ಲಿ ಬಹಳ ಮಂದಿಯಲ್ಲಿತ್ತು. ಅದರಿಂದ ಮುಷ್ಕರದ ಅಂಗವಾಗಿ ಹಲವಾರು ಕಾರ್ಯಕ್ರಮಗಳನ್ನು ನಿಯೋಜಿಸಿದ್ದರು. ಅವುಗಳಲ್ಲಿ ಬಹು ಮುಖ್ಯವಾದುದು ಎಂದರೆ ಹಳ್ಳಿಗಳ ಯೋಜನೆ. ಹಳ್ಳಿಗಳಿಂದ ಮೈಸೂರಿಗೆ ಓದಲು ಬಂದಿದ್ದ ವಿದ್ಯಾರ್ಥಿಗಳು ತಮ್ಮ ತಮ್ಮ ಹಳ್ಳಿಗೆ ಹಿಂದಿರುಗಿ ಅಲ್ಲಿಯೆ ರಚನಾತ್ಮಕ ಕಾರ್ಯ ನಡೆಸಬೇಕು ಆನಂದನೇ ಆ ಯೋಜನೆ ತಯಾರಿಸಿ ಅದನ್ನು ಗ್ರಾಮಾಂತರ ಹೋಗುವ ವಿದ್ಯಾರ್ಥಿಗಳಿಗೆ ವಿವರಿಸಿದ. ಹಳ್ಳಿಗಳಲ್ಲಿಯ ಜನರಿಗೆ ಅಭ್ಯಾಸ, ಅವರಿಗೆ ಸುತ್ತಲಿನ ಪ್ರಪಂಚದ ಸುದ್ದಿ ಸಮಾಚಾರಗಳನ್ನು ಅರಿವು ಮಾಡಿಕೊಡುವುದು, ನಾಡಿನಲ್ಲಿ ಹಳ್ಳಿಗರ ಸ್ಥಾನ, ರಾಜಕೀಯ

ಆಂದೋಲನದಲ್ಲಿ ಅವರ ಪಾತ್ರ, ಅವರು ನೀಡಬೇಕಾದ ಸೇವೆ, ಮಾಡ ಬೇಕಾದ ತ್ಯಾಗಗಳನ್ನೆಲ್ಲಾ ಹಳ್ಳಿಯ ರೈತರಿಗೆ ಈ ವಿದ್ಯಾರ್ಥಿಗಳು ಬೋಧಿಸ ಬೇಕಾಗಿತ್ತು. ಇದರಿಂದ ಹಳ್ಳಿಗರ ಸಾಮಾಜಿಕ ನೈತಿಕ ಮತ್ತು ಆರ್ಥಿಕ ಬಲ ಹೆಚ್ಚುತ್ತಿತ್ತು. ಈ ಕೆಲಸದ ಮೇಲ್ವಿಚಾರಣೆಯೂ ಆನಂದನಿಗೇ ಬಿತ್ತು. ಹಳ್ಳಿಗಳಿಗೆ ಹತ್ತುಪ್ಪತ್ತು ಮಂದಿಯ ಗುಂಪುಗಳು ಹೋಗುತ್ತಿದ್ದುವು. ಆನಂದನೂ ಅಂತಹ ಗುಂಪೊಂದರ ನಾಯಕನಾಗಿ ಪ್ರವಾಸ ಕೈಕೊಂಡ. ಆ ಗುಂಪು ಪ್ರತಿ ಹಳ್ಳಿಯಲ್ಲಿಯೂ ಅರ್ಧ ಗಂಟೆಯೋ ಮುಕ್ಕಾಲು ಗಂಟೆಯೋ ನಿಂತು ಜನರಿಗೆ ರಚನಾತ್ಮಕ ಕಾರ್ಯಕ್ರಮ ತಿಳಿಸಿ ಮುಂದಿನ ಕಾರ್ಯಕ್ಕೆ ಯಾರನ್ನಾದರೂ ನಿಯೋಜಿಸಿ ಕಾಲ್ನಡಿಗೆಯಲ್ಲಿಯೇ ಮುಂದಿನ ಹಳ್ಳಿಗೆ ಹೋಗುತ್ತಿದ್ದಿತು. ಕಾಲಕಾಲಕ್ಕೆ ಸರಿಯಾಗಿ ಅನ್ನ ನೀರಿಲ್ಲ. ಮಳೆ-ಗಾಳಿ, ಹಳ್ಳ ತಿಟ್ಟೆನ್ನದೇ ಕಾಲು ನಡಿಗೆಯಲ್ಲೇ ಹಳ್ಳಿಹಳ್ಳಿ ಸುತ್ತುತ್ತಿದ್ದರು. ಕಷ್ಟಗಳು ನೂರಾರು ಬಂದೆರಗಿದರೂ ಅವುಗಳನ್ನು ಅವರು ಲೆಕ್ಕಿಸುತ್ತಲೇ ಇರಲಿಲ್ಲ. ಒಂದು ವಾರದ ಪ್ರಚಾರದ ನಂತರ ಆನಂದ ತನ್ನ ಗುಂಪಿನೊಂದಿಗೆ ಮೈಸೂರಿಗೆ ಹಿಂತಿರುಗಿದನು

ರಾಮು ಮುಷ್ಕರ ಆರಂಭವಾದಾಗ ಮೈಸೂರಿನಲ್ಲಿದ್ದವನು ಒಂದೆರಡು ದಿನಗಳಾದ ಮೇಲೆ ಬೆಂಗಳೂರಿಗೆ ಹೊರಟುಹೋದ. ಮುಷ್ಕರದ ಕಾಲದಲ್ಲಿ ಒಬ್ಬರಿಗೊಬ್ಬರಿಗೆ ಪತ್ರವ್ಯವಹಾರ ನಡೆಯಲು ಅವಕಾಶವಾಗಲೀ ಪುರು ಸೊತ್ತಾಗಲೀ ಇರಲಿಲ್ಲ. ಇದರಿಂದ ಒಬ್ಬರಿಗೊಬ್ಬರ ಆಗುಹೋಗುಗಳು ಬಹಳ ದಿನಗಳ ವರೆಗೂ ತಿಳಿಯಲೇ ಇಲ್ಲ.

ಮುಷ್ಕರ ಆರಂಭವಾದೊಡನೆ ಮೂರು ನಾಲ್ಕು ದಿನಗಳಿಗೇ ಕಾಲೇಜಿನ ಅಧಿಕಾರಿಗಳು ಹೆಣ್ಣುಮಕ್ಕಳ ತಂದೆಯರಿಗೆ ಪತ್ರ ಬರೆದು ಬಿಟ್ಟರು. ಇದರಿಂದ ಹಲವಾರು ವಿದ್ಯಾರ್ಥಿನಿಯರ ತಂದೆಯರು ಬಂದು ಅವರನ್ನು ಕರೆದುಕೊಂಡು ಹೊರಟುಹೋದರು. ಅನುಸೂಯಳ ತಂದೆ ಕೂಡ ಅವಳನ್ನು ಊರಿಗೆ ಕರೆದುಕೊಂಡು ಹೊರಟುಹೋದರು. ಅವಳಿಗೂ ಹೋಗಲಿಷ್ಟವಿತ್ತೋ ಏನೋ ತಂದೆಯ ಮಾತಿಗೆ ಕೊಂಚವೂ ಎದುರಿಲ್ಲದೆ ಹೊರಟುಹೋದಳು. ಅವಳು ಊರಿಗೆ ಹೊರಡುವ ಮುನ್ನಾದಿನವೇ ಆನಂದ ಹಳ್ಳಿಯ ಪ್ರವಾಸ

ಕೈಕೊಂಡಿದ್ದುದು. ಅವನು ಕಳ್ಳಿಯಿಂದ ಹಿಂದಿರುಗುವ ವೇಳೆಗಾಗಲೇ ಅವಳು ಊರಿನಲ್ಲಿ ತಂದೆಯ ಮನೆಯಲ್ಲಿ ಹಾಯಾಗಿದ್ದಳು.

ಲಲಿತಳಿಗೆ ವಿಪರೀತ ಗಾಬರಿ, ಕಳವಳ! ಮುಷ್ಕರ ಆರಂಭವಾದೊಡನೆಯೇ ಆನಂದನನ್ನು ಎಚ್ಚರಿಸಿದಳು. ಮುಷ್ಕರದಲ್ಲಿ ನೀನು ಸೇರಬೇಡವೆಂದು ಅವನಿಗೆ ನೂರು ಬಾರಿ ಹೇಳಿದಳು. ಆದರೆ ಅವನು ಚಳುವಳಿಯಲ್ಲಿ ಸೇರಿಬಿಡುವನೆಂದು ಅವಳಿಗೆ ಹೇಗೋ ಅನಿಸಿತ್ತು. ಮುಷ್ಕರದ ಆರಂಭದ ದಿನ—ಸೋಮವಾರ ಆಗಸ್ಟ ೧೦ರಿಂದ ಕಾಲೇಜಿನ ಮುಂಭಾಗದಲ್ಲಿ ವಿದ್ಯಾರ್ಥಿಗಳ ಸಭೆಯಲ್ಲಿ ಆನಂದ ಭಾಷಣ ಮಾಡಿದುದು ಕೇಳಿದಾಗಲಂತೂ ಅವಳಿಗೆ ಜಂಘಾ ಬಲವೇ ಉಡುಗಿದಂತಾಯಿತು ಯಾವ ಕ್ಷಣದಲ್ಲಿ ಹೇಗೋ ಏನೋ; ಏನಾಗಿ ಬಿಡುವುದೋ - ಎಲ್ಲೆಲ್ಲಿಯೂ ಗುಂಡಿನೇಟು, ಲಾಠಿಚಾರ್ಜು, ಕಂಬನಿ ಹೊಗೆ(Tear gas)ಗಳ ಪ್ರಯೋಗವಾಗುತ್ತಿದೆ. ಲೆಕ್ಕವಿಲ್ಲದಷ್ಟು ಜನ ಮಡಿಯುತ್ತಿದಾರೆಂದು ಪತ್ರಿಕೆಗಳಲ್ಲಿ ಅವಳು ಓದಿದ್ದಳು. ಇನ್ನು ವ್ಯೆಸೂರಿನಲ್ಲಿಯೂ ಅದೇ ರೀತಿಯಾಗಿ ಹೋದರೇನು ಗತಿ? ಅದನ್ನು ನೆನೆದರೇ ಅವಳಿಗೆ ಎದೆನಡುಕ ಬರುತ್ತಿತ್ತು. ಅಮ್ಮನನ್ನು ಕರೆಯಿಸಿಕೊಂಡರೆ ಒಳ್ಳೆಯದೆಂದುಕೊಂಡು ಪಾರ್ವತಮ್ಮನವರಿಗೆ ಪತ್ರಬರೆದು ಅವರನ್ನು ಕರೆಸಿಕೊಂಡಳು.

ಆನಂದ ಹೊತ್ತುಹೊತ್ತಿಗೆ ಮನೆಗೆ ಬರುತ್ತಿರಲಿಲ್ಲ. ಯಾವಾಗಲೋ ಒಂದು ಸಾರಿ ಬಂದು ಒಂದಿಷ್ಟು ಅನ್ನ ತಿಂದುಹೋಗುತ್ತಿದ್ದ. ಕೊಂಚವಾದರೂ ವಿಶ್ರಾಂತಿಯಾಗಲೀ ಪುರುಸೊತ್ತಾಗಲೀ ಸಿಗುತ್ತಿರಲಿಲ್ಲ. ಕೆಲಸದ ಭರದಲ್ಲಿ ಯಾವುದೂ ಅವನಿಗೆ ಬೇಕಿರಲಿಲ್ಲ. ಯಾವ ಸುಖದ ಮೇಲೂ ಅವನಿಗೆ ಗಮನವಿರಲಿಲ್ಲ ಆದರೆ ಲಲಿತ ಮತ್ತು ಪಾರ್ವತಮ್ಮ ಮಾತ್ರ ಒಂದೇ ಸಮನಾಗಿ ಕೊರಗುತ್ತಿದ್ದರು. ಅವನು ಮಾತಾಡುವ ಸಭೆಗಳಿಗೆಲ್ಲಾ ಹೋಗಿಬರುತ್ತಿದ್ದರು. ಒಂದು ದಿನ ಅವನು ಊಟಕ್ಕೆ ಬರದಿದ್ದರೆ ಇಬ್ಬರಿಗೂ ಎದೆ ತಲ್ಲಣಿಸುತ್ತಿತ್ತು. ಅವನಿಗೆ ಏನಾಗಿ ಹೋಯಿತೋ ಏನೋ ಎಂದೇ ಯೋಚನೆ. ಅವನು ಬರುವ ವರೆಗೂ ಇಬ್ಬರೂ ಹಸಿದುಕೊಂಡೇ ಕುಳಿತಿರುತ್ತಿದ್ದರು. ಕೊನೆಗೊಮ್ಮೆ ಊಟ ಮಾಡಲು ಕುಳಿತರೂ ಅನ್ನ ಗಂಟಲಲ್ಲಿ

ಇಳಿಯುತ್ತಲೇ ಇರಲಿಲ್ಲ. ಬಿಸಿಲಿನ ಬೇಗೆಯಲ್ಲಿ ಬೆಂದು ಕಾಡಿಗೆಯಾದ ಆನಂದನ ಮುಖ ಕಂಡು ಇಬ್ಬರೂ ಒಳಗೊಳಗೇ ಕೊರಗುತ್ತಿದ್ದರು.

ಮುಷ್ಕರದ ಆರನೆಯ ದಿನ ಆನಂದ ಬೆಳಿಗ್ಗೆಯಿಂದ ಮನೆಗೆ ಬಂದಿರಲಿಲ್ಲ. ರಾತ್ರಿ ೯ ಗಂಟೆಯ ವೇಳೆಗೆ ಅವಸರವಸರವಾಗಿ ಬಂದ. ಆನಂದ ಲಲಿತ ಇಬ್ಬರೂ ಒಟ್ಟಿಗೆ ಊಟಕ್ಕೆ ಕುಳಿತರು. ಪಾರ್ವತಮ್ಮನವರು ಬಡಿಸುತ್ತಿದ್ದರು. ಆನಂದ ಮಾತಿಲ್ಲದೆ ಬೇಗ ಬೇಗ ಊಟ ಮಾಡುತ್ತಿದ್ದ.

"ಆನಂದ—"

"ಏನಕ್ಕ ?"

"ನೋಡೋ. ನೀನು ಚಳುವಳಿಯಲ್ಲಿ ಅಷ್ಟೊಂದು ಮುಂದಾಗಿ ಹೋಗಬೇಡವೋ. ಉಳಿದ ಹುಡುಗರಿಲ್ಲವೇ ? ಹಾಗೆಯೇ ನೀನೂ ಹಿಂದೆ ಇದ್ದುಕೊಂಡು ಕೆಲಸ ಮಾಡಲು ಸಾಧ್ಯವಿಲ್ಲವೇ ? ಹೀಗೆ ಕಣ್ಣು ಮುಚ್ಚಿಕೊಂಡು ಮುಂದೆ ನುಗ್ಗಿದರೆ ಏನಾದ ಹಾಗಾಯಿತು ? ಅದರಿಂದ ಕೆಡಕು ಆಗುವದೇ ಹೊರತು ಒಳ್ಳೆಯದೇನೂ ಆಗುವಂತಿಲ್ಲ. ಯೋಚನೆ ಮಾಡು" ಎಂದಳು ಲಲಿತ.

"ನಾವು ಮಾಡುವುದನ್ನು ನಾವು ಮಾಡಲೇ ಬೇಕು" ಎಂದ ಆನಂದ ಒಂದು ತುತ್ತು ಬಾಯಿಗಿಟ್ಟುಕೊಳ್ಳುತ್ತಾ.

ಪಾರ್ವತಮ್ಮನವರಂತೂ ಇದು ವರೆಗೂ ತಡೆದಿದ್ದ ಕಣ್ಣೀರನ್ನು ಈಗ ಹರಿಬಿಟ್ಟರು.

"ನೀನು ನನಗೊಬ್ಬನೇ ಮಗ ಸುಮ್ಮನೆ ಕಾಲೇಜಿಗೆ ಹೋಗು ಆನಂದ. ಉಳಿದವರು ಹೇಗಾದರೂ ಮಾಡಿಕೊಳ್ಳಲಿ" ಎಂದರು ಬಿಕ್ಕಿಬಿಕ್ಕಿ ಅಳುತ್ತಾ.

ಆನಂದನಿಗೆ ಆ ಮಾತಿನ ಹಿಂದಿನ ಹೃದಯದ ನೋವು, ಪ್ರೇಮ, ಮಮತೆಗಳು ಮನಮುಟ್ಟಿದುವು. ಆದರೆ ಅವನೇನು ತಾನೇ ಮಾಡಲಾದೀತು? ಅದಕ್ಕಾಗಿ ಮಾತನಾಡದೆ ಸುಮ್ಮನಿದ್ದ.

"ನೋಡು ಆನಂದ, ನೀನು ಓದಿ ಬಂದರೆ ನಾವೆಲ್ಲಾ ಸುಖವಾಗಿರ ಬಹುದೆಂದು ಆಸೆಯಿಂದಿದ್ದೆ. ನನ್ನ ದುರದೃಷ್ಟ; ನೀನೂ ಚಳುವಳಿಗೆ ಸಿಕ್ಕಿದೆ" ಎಂದರು ಪಾರ್ವತಮ್ಮನವರು.

"ಇಲ್ಲಮ್ಮ, ಎಲ್ಲರೂ ಶಾಲೆ ಕಾಲೇಜು ಬಿಟ್ಟುಬಂದಿದಾರೆ. ಗಂಡಸರು, ಹೆಂಗಸರು, ಮಕ್ಕಳೆನ್ನದೆ ಎಲ್ಲರೂ ಹೋರಾಟದಲ್ಲಿ ಧುಮುಕಿದಾರೆ; ಪ್ರಾಣ ತೆರುತ್ತಿದಾರೆ. ಅಂತಹುದರಲ್ಲಿ ಯಾರಿಗಾದರೂ ಹಿಂತೆಗೆಯಲು ಸಾಧ್ಯವೇನಮ್ಮ? ಮೂಲೆ ಮೂಲೆಯಿಂದ ಚಿಕ್ಕ ಮಕ್ಕಳು ಕೂಡ ಕ್ರಾಂತಿಯ ಕೂಗು ಹಾಕುತ್ತಿದಾರೆ. ನಾನು ಸುಮ್ಮನೆ ಮೂದೇವಿಯಂತೆ ಕುಳಿತಿರಲೇ? ನೀನೇ ಹೇಳಮ್ಮ. ಎಲ್ಲರೂ ಕಾಲೇಜಿನವರೆಲ್ಲರೂ ಆಂದೋಲನದಲ್ಲಿ ಭಾಗ ವಹಿಸಿ ಶಾಲೆ ಕಾಲೇಜಿಗೆ ಬಹಿಷ್ಕಾರ ಹಾಕಿರುವಾಗ ನಾನು ಯಾವ ಮುಖದಿಂದ ಕಾಲೇಜಿಗೆ ಹೋಗಲಮ್ಮ?" ಎಂದ ಆನಂದ.

ಪಾರ್ವತಮ್ಮನವರ ಅಳು ಮತ್ತೆ ಹೆಚ್ಚಾಯಿತು. ನಾನು ಅವನ ಒಳ್ಳೆಯದಕ್ಕಾಗಿಯೇ ಹೇಳಿದರೂ ನನ್ನ ಮಾತು ಕೇಳಲಿಲ್ಲವಲ್ಲಾ ಎಂಬ ಅಸಮಾಧಾನ. ಒಬ್ಬನೇ ಮಗ. ಎಲ್ಲಿಯಾದರೂ ಗುಂಡಿನೇಟಿಗೆ ತುತ್ತಾದರೆ ಎಂಬ ಹೆದರಿಕೆ! ಜತೆಗೆ ಸೆರೆಮನೆಗೇನಾದರೂ ಹೋದರೆ ಸಂಬಂಧಿಗಳು, ದಾಯಾದಿಗಳ ವ್ಯಂಗ್ಯಕ್ಕೆ ಎಡೆಯಾಗುವುದಲ್ಲಾ—ಕುಲಕ್ಕೆ ಅಪಮಾನವಾಗುವುದಲ್ಲಾ—ನಗುವವರ ಮುಂದೆ ಎಡವಿಬಿದ್ದ ಹಾಗಾಗುವುದಲ್ಲಾ ಎಂಬ ಯೋಚನೆ! ಇದೆಲ್ಲದರಿಂದ ಅವರ ಮನಸ್ಸಿನ ದುಃಖ ಉಮ್ಮಳಿಸಿ ಬಂತು.

ಆನಂದನಿಗೂ ಆ ವಿಚಾರ ಗೊತ್ತು. ತಾಯಿ ತನ್ನ ಒಳ್ಳೆಯದನ್ನೇ ಮನಸ್ಸಿನಲ್ಲಿಟ್ಟುಕೊಂಡು ಈ ಮಾತಾಡುತ್ತಿರುವರೆಂದು ಅವನಿಗೂ ಅರಿವು ಆಗಿತ್ತು. ಹಿಂದೆ ರಾಮುವಿನ ಸ್ನೇಹವಾಗುವ ಮೊದಲು ಇಂತಹ ಮಾತು ಹೊರಬಿದ್ದಿದ್ದರೆ ಆಗ ಅವನು ಅವರನ್ನು ಶಪಿಸುತ್ತಿದ್ದ. ನನ್ನ ಜೀವನ ಹಾಳಾಗಲೆಂದು ಅವರ ಇಷ್ಟವೆಂದು ಸಾಧಿಸುತ್ತಿದ್ದ. ಆದರೆ ಈಗ ರಾಮುವಿನ ಮಾತುಗಳ ಪ್ರಭಾವ, ಮನಸ್ಸಿನ ಕಡೆದಾಟಗಳ ಪರಿಣಾಮವಾಗಿ ಭಾವನೆ ಕೊಂಚಕೊಂಚವಾಗಿ ತಿಳಿಯಾಗುತ್ತಿತ್ತು. ಹೃದಯ ಪಕ್ವವಾಗಿತ್ತು. ತನ್ನ ತಾಯಿ, ತನ್ನ ಅಕ್ಕ ತಾನು ಮೊದಲು ವಂಚಿಸಿಕೊಂಡಿದ್ದಂತೆ ತನ್ನನ್ನು ದ್ವೇಷಿಸುವುದಿಲ್ಲ; ತನ್ನನ್ನು ಪ್ರೇಮಿಸುವರೆಂಬುದು ಮನವರಿಕೆಯಾಗಿತ್ತು. ತಾಯಿಯ ಇಂದಿನ ಕಣ್ಣೀರಿನ ಹಿಂದೆ ಎಷ್ಟೊಂದು ನೋವು ಪ್ರೀತಿಯಿದೆ ಎಂಬುದು ಅವನಿಗೆ ಅರಿವಾಗಿ ಕಣ್ಣಿನಲ್ಲಿ ಹಸಿಗೂಡಿತು. ಆದರೆ ತಾಯಿಯ

ಮಾತಿನಂತೆ ನಡೆಯುವುದಾಗಲಿ, ಅದನ್ನೊಪ್ಪುವುದಾಗಲಿ ಅವನಿಂದ ಸಾಗುತ್ತಿರಲಿಲ್ಲ. ಅವರ ಮಾತಿನಂತೆ ಕಾಲೇಜಿಗೆ ಹೋಗುವುದೆಂದರೆ ಎಂತಹ ಅವಮಾನ? ಇದೂ ಅಲ್ಲದೆ ಅದು ತನ್ನ ಮನಸ್ಸೊಪ್ಪದ ರೀತಿ ತಾನೊಲ್ಲದ ರೀತಿಯನ್ನು, ಹಾದಿಯನ್ನು ತುಳಿದು ತನ್ನನ್ನು ತಾನೇ ವಂಚಿಸಿಕೊಳ್ಳಲು ಅವನು ಸಿದ್ಧನಾಗಿರಲಿಲ್ಲ. ಭಾರತವೆಲ್ಲಾ ಜ್ವಾಲಾಮುಖಿಯಾಗಿರುವಾಗ ತಾನೊಬ್ಬ ತಣ್ಣಗೆ ಕುಳಿತಿರಲು ಹೇಗೆ ಸಾಧ್ಯ? ನೂರು ಜನ ಸಾವಿರ ಹಾದಿ ತೋರಿಸಿದರೂ ತನ್ನ ಬಾಳ ಹಾದಿ ರೂಪಿಸುವವನು ತಾನೇ ಅಲ್ಲವೇ? ಆನಂದನಿಗೆ ಇದೆಲ್ಲಾ ಯೋಚಿಸಿದಂತೆ ಉದ್ರೇಕ ಬಂದಂತಾಯಿತು. ಈ ಉದ್ವಿಗ್ನತೆಯಲ್ಲಿ ತಾಯಿಗೆ ಒಂದು ಪುಟ್ಟ ಭಾಷಣವನ್ನೇ ಕೊಟ್ಟುಬಿಟ್ಟ. ಆದರೆ ಪಾರ್ವತಮ್ಮನವರದು ಎಲ್ಲಕ್ಕೂ ಒಂದೇ ಉತ್ತರ—ಒಂದೇ ಹಟ—ಒಂದೇ ಮಾತು.

"ಅವರೆಲ್ಲ ಮಾಡಿಕೊಳ್ಳಲಿ. ನೀನು ಯಾಕೆ ಸೇರಬೇಕು?"

"ಅದು ಹೇಗಮ್ಮಾ ಸಾಧ್ಯ? ಅವರೆಲ್ಲ ರಕ್ತವನ್ನು ಬೆವರಿನಂತೆ ಬಸಿಯುತ್ತಿದಾರೆ. ನಾನಿಲ್ಲಿ ಅದನ್ನು ನೋಡಿಕೊಂಡು ತೆಪ್ಪಗೆ ಕುಳಿತಿರಲೇನು?"

"ನೀನೊಬ್ಬನಿಲ್ಲದಿದ್ದರೆ ಏನೂ ನಷ್ಟವಾಗಲಾರದು. ನಿನ್ನೊಬ್ಬನಿಂದ ಏನಾದೀತು?"

"ಹಾಗೆಯೇ, ಎಲ್ಲರೂ ಅಂದರಾಗುತ್ತದೆಯೇನಮ್ಮ? ಒಬ್ಬ ಒಬ್ಬ ಎಂತಲೇ ಎಲ್ಲರೂ ಹಿಂದೆ ಬಿದ್ದರೆ? ನೀನೇ ನೂರು ಸಾರಿ ಹೇಳಿರಲಿಲ್ಲವೇನಮ್ಮ? 'ಹನಿಗೂಡಿದರೆ ಹಳ್ಳ' ಅಂತ. ನಲವತ್ತು ಕೋಟಿ ಜನರೂ ಒಟ್ಟಿಗೇ ಸೇರಿ ಕೆಲಸ ಮಾಡಿದರೆ ಯಾವುದು ತಾನೇ ಅಸಾಧ್ಯ ಹೇಳಮ್ಮ? ಮಿಣುಕು ಹುಳು ಒಂದೇ ಆದರೆ ಹೆಚ್ಚು ಬೆಳಕು ಕೊಡಲಾರದು. ಆದರೆ ನೂರಾರು ಮಿಣುಕು ಹುಳಗಳು ಕೂಡಿಕೊಂಡರೆ ರಾತ್ರಿಯಲ್ಲೇ ಹಗಲು ಮಾಡಲಾರವೇ? ಎಲ್ಲರೂ ನನ್ನೊಬ್ಬನಿಂದ ಏನೂ ಸಾಗದೆಂದು ಮೂಲೆ ಹಿಡಿದರೆ ಏನೂ ಆಗುವುದೇ ಇಲ್ಲ. ಧೈರ್ಯದಿಂದ ಒಂದಾಗಿ ಎಲ್ಲರೂ ಕಾರ್ಯನಿರತರಾದರೆ, ಕೆಲಸಕ್ಕೆ ಕೈ ಹಚ್ಚಿದರೆ ಯಾವುದನ್ನು ತಾನೇ ಸಾಧಿಸಲಾರರು, ನೀನೆ ಹೇಳಮ್ಮ?"

ಪಾರ್ವತಮ್ಮನವರಿಗೆ ಇದಕ್ಕೇನುತ್ತರ ಕೊಡಬೇಕೆಂಬುದು ಗೊತ್ತಾಗಲಿಲ್ಲ. ತಮ್ಮ ಮಾತೆಲ್ಲಾ ನೀರಿನಲ್ಲಿ ಹೋಮ ಮಾಡಿದಂತಾಯಿತಲ್ಲಾ ಎಂದು ಕಣ್ಣೀರುಗರೆದರು.

"ನೀನೇನು ತಾನೇ ಮಾಡುತ್ತೀ ಹೇಳು—ಎಲ್ಲಾ ನನ್ನ ಕರ್ಮಫಲ. ಹೊತ್ತು ಹೆತ್ತು ಸಾಕಿ ಸಲುಹಿ ಬೆಳೆಸಿ ಇಷ್ಟು ದೊಡ್ಡವನನ್ನಾಗಿ ಮಾಡಿದೆ. ಎಷ್ಟೆಷ್ಟೋ ಕಷ್ಟ ಬಂದರೂ ನುಂಗಿಕೊಂಡಿದ್ದೆ. ಇನ್ನೂ ಏನೇನು ನೋಡಬೇಕೋ ಇನ್ನೂ ಏನೇನು ಅನುಭವಿಸಬೇಕೋ ಅದೂ ಆಗಿ ಹೋಗಲಿ. ನನ್ನ ಹಣೆಯಲ್ಲಿ ಬರೆದಿದ್ದರೆ ನನ್ನಿಂದ ತಪ್ಪಿಸಲು ಸಾಧ್ಯವೇ? ಎಲ್ಲಾ ಆ ಶ್ರೀರಾಮನ ಲೀಲೆ. ರಾಮ! ರಾಮ! ನಿನ್ನ ಕಣ್ಣು ನಮ್ಮ ಮೇಲೆ ಎಂದು ತೆರೆಯುತ್ತದೋ!"

ಪಾರ್ವತಮ್ಮನವರು ಬಿಕ್ಕಿಬಿಕ್ಕಿ ಅಳಲಾರಂಭಿಸಿದರು. ಲಲಿತಳಿಗೆ ಇನ್ನು ತಡೆಯಲಾಗಲಿಲ್ಲ. ಆದರೆ ಯಾರಿಗೂ ಏನೂ ಹೇಳುವಂತಿಲ್ಲ. ತಾಯಿಯನ್ನು ಸಮಾಧಾನಗೊಳಿಸಲು ಪ್ರಯತ್ನಿಸಿದಳು. ಆದರೆ ಅವಳಿಗೂ ಅದೇ ಹೆದರಿಕೆ. ಆನಂದನಿಗೆ ಏನಾಗಿ ಹೋಗುವುದೋ ಯಾವ ಕ್ಷಣಕೆ, ಯಾವ ಕೆಟ್ಟ ಸುದ್ದಿ ಬರುವುದೋ ಎಂಬ ಹೆದರಿಕೆ ಅವಳನ್ನು ಥರಥರ ನಡುಗಿಸಿತ್ತು. ಆದರೆ ತಾನೇ ಅದನ್ನು ತಾಯಿಯ ಮುಂದೆ ತೋರಗೊಟ್ಟರೆ ತಾಯಿಗೆ ಸಮಾಧಾನ ಹೇಳುವವರೇ ಯಾರೂ ಇಲ್ಲ. ಜತೆಗೆ ತಾಯಿಯಿನ್ನೂ ಹೆಚ್ಚು ಗಾಬರಿಗೊಳ್ಳಬಹುದೆಂದು ತೋರಿಕೆಯ ಧೈರ್ಯ ತಾಳಿ ಪಾರ್ವತಮ್ಮನವರಿಗೆ ಸಮಾಧಾನ ಹೇಳುತ್ತಿದ್ದಳು. ಆದರೆ ಆ ಸಮಾಧಾನದ ಮಾತಿನಲ್ಲಿ ಅವಳಿಗೇ ಸಾಕಷ್ಟು ನಂಬಿಕೆಯಿರಲಿಲ್ಲ.

"ಹೆದರಿಕೆಯೇನೂ ಇಲ್ಲಮ್ಮ. ಹುಡುಗರು ನಾಲ್ಕು ದಿನ ಓಗಾಡುತ್ತಾರೆ ಮತ್ತೆ ತಾವಾಗಿಯೇ ಸರಿ ಹೋಗುತ್ತಾರೆ" ಎಂದಳು.

ಆದರೆ ಅವಳ ಈ ಮಾತಿನಲ್ಲಿ ಸತ್ಯವಿಲ್ಲೆಂದು ಪಾರ್ವತಮ್ಮನವರಿಗೆ ಗೊತ್ತು. ಅದು ಬರಿಯ ಪೊಳ್ಳು ಮಾತೆಂಬುದು ಲಲಿತಳಿಗೂ ಗೊತ್ತು.

ಆನಂದ ಊಟ ಮುಗಿಸಿ ತಟ್ಟೆಯಲ್ಲೇ ಕೈತೊಳೆದು ಹೊರಡಲನುವಾದ ಪಾರ್ವತಮ್ಮನವರಂತೂ ಒಂದೇ ಸಮನಾಗಿ ಬಿಕ್ಕಿಬಿಕ್ಕಿ ಅಳುತ್ತಿದ್ದರು ಲಲಿತ ಅವನ ಹಿಂದೆಯೇ ಬಾಗಿಲ ವರೆಗೂ ಹೋದಳು.

"ಆನಂದ!"

"ಏನಕ್ಕ" ಎಂದು ಆನಂದ ಮೆಟ್ಟಲಿಳಿದವನು ಅಕ್ಕನ ಕಡೆಗೆ ತಿರುಗಿದ.

"ಆನಂದ, ಚಳುವಳಿಯಲ್ಲಿ ನೀನು ಭಾಗವಹಿಸು., ಕೆಲಸ ಮಾಡು. ನಾನು ಬೇಡೆನ್ನುವುದಿಲ್ಲ. ನಿನ್ನ ಮನಸ್ಸು ಒಪ್ಪಿದ ಹಾಗೆ ನಡಿ. ಆದರೆ ಎಲ್ಲಕ್ಕೂ ಮುಂದಾಗಿ ನುಗ್ಗಬೇಡ. ಒರಳಿಗೆ ಕೊರಳು ಕೊಡಬೇಡ. ಜೀವಕ್ಕೆ ಎಲ್ಲಾದರೂ ತೊಂದರೆಯಾಗದಂತೆ ಜಾಗರೂಕನಾಗಿರು ಅಷ್ಟೆ. ಅಮ್ಮನ ಮನಸ್ಸು ಹೇಗಿದೆಯೆಂದೂ ಯೋಚಿಸು. ಅಮ್ಮನಿಗಿರುವವರೆಲ್ಲಾ ನಾವಿಬ್ಬರು ನೀನೊಬ್ಬನೇ ಮಗ. ನಾನೊಬ್ಬಳು ಮಗಳು. ನನ್ನ ಗತಿಯಂತೂ ಹೀಗಾಯಿತು. ಇನ್ನುಳಿದವನು ನೀನಾದರೂ ಸುಖವಾಗಿ ಚೆನ್ನಾಗಿರಲೆಂದು ನಮ್ಮೆಲ್ಲರ ಆಸೆ. ಆದರೆ ನೀನು ಕಷ್ಟಕ್ಕೇ ಕತ್ತು ಕೊಡಲು ಹೊರಟಿದ್ದೀ—ನಾವೆಲ್ಲ ಕಷ್ಟಪಡಲೆಂದೇ ಹುಟ್ಟಿದೆವೋ ಏನೋ—ಹುಂ, ಹುಷಾರಾಗಿರು. ನಿನಗೇನಾದರೂ ಕೊಂಚ ಹಿಂಸೆಯಾದರೂ ಅಮ್ಮನ ಎದೆ ಒಡೆದೇ ಹೋಗುತ್ತದೆ."

"ಹೂಂ, ಅಕ್ಕ."

"ಮರೆಯಬೇಡ. ಹುಷಾರು."

ಲಲಿತ ನಿಟ್ಟುಸಿರಿಟ್ಟಳು. ಅವಳ ಮಾತು ಕೇಳುತ್ತಾ ತಲೆ ತಗ್ಗಿಸಿದ್ದ ಆನಂದ ಮೆಲ್ಲನೆ ತಲೆಯೆತ್ತಿ ನೋಡಿದ. ಮನೆಯ ಮುಂದಿನ ವಿದ್ಯುದ್ದೀಪದ ಬೆಳಕು ಅವಳ ಮುಖದ ಮೇಲೆ ಬಿದ್ದಿತ್ತು. ಎಳೆಯ ಮಗುವಿನಂತಿದ್ದ ನಿಷ್ಕಳಂಕವಾದ ಅವಳ ಮುಖದಲ್ಲಿ ಹೆದರಿಕೆ ಮೂಡಿತ್ತು. ಕಣ್ಣುಗಳಲ್ಲಿ ಆಳವಾದ ದುಃಖ ಮನೆಮಾಡಿಕೊಂಡಿತ್ತು. ಗಾಳಿಯಿಂದ ಹಾರಾಡುತ್ತಿದ್ದ ನಾಲ್ಕಾರು ಕುರುಳುಗಳು ಹಣೆಯನ್ನು ಮುತ್ತಿಕ್ಕುತ್ತಿದ್ದುವು. ಅವಳ ರೆಪ್ಪೆ ತೇವವಾಗಿ ಹೊರಳಿದ್ದ ಒಂದೇ ಒಂದು ಹನಿ ಕಣ್ಣೀರು ಕೆನ್ನೆಯ ಮೇಲುರುಳಿ ದೀಪದ ತುಸು ನೀಲ ಬೆಳಕಿನಲ್ಲಿ ಹೊಳೆಯಿತು. ಆ ಒಂದು ಹನಿ ಕಣ್ಣೀರಿನ ಹಿಂದಿನ ಪ್ರೇಮ, ನೋವು, ತಾಳ್ಮೆಗಳ ಮಹಾಜ್ವಾಲೆ ಆವನೆದೆ ತಾಕಿ ರಕ್ತ ಕುದಿಸಿತು. ಅವನ ಕಣ್ಣಿನಲ್ಲಿಯೂ ತಾನೇತಾನಾಗಿ ಬುಗ್ಗೆ ಕಾಣಿಸಿಕೊಂಡಿತು. ಮರುಮಾತಿಲ್ಲದೆ ಭಾರವಾದ ಹೃದಯ ಹೊತ್ತುಕೊಂಡು ಮುಷ್ಕರದ ಕಾರ್ಯಾಲಯದ ಕಡೆಗೆ ನಡೆದ.

ದಾರಿಯಲ್ಲೆಲ್ಲಾ ಆನಂದನಿಗೆ ಅದೇ ಯೋಚನೆ. ಪಾರ್ವತಮ್ಮನವರಿಗೂ ಲಲಿತಳಿಗೂ ತನ್ನಲ್ಲಿ ಎಷ್ಟು ಪ್ರೇಮವಿದೆ, ಎಷ್ಟು ಮಮತೆಯಿದೆ ಎಂಬುದನ್ನು ಆನಂದ ಮೊತ್ತಮೊದಲಿಗೆ ಇಂದು ತಿಳಿದ. ಇದ ವರೆಗೂ ಅವರ ಮಾತಿಗೆ, ಅವರ ನಡವಳಿಕೆಗೆ ಅಪಾರ್ಥ ಮಾಡಿ ತನ್ನನ್ನು ಕಂಡರೆ ಅವರಿಗೆ ಆಗದು ಎಂದುಕೊಂಡಿದ್ದ. ಆದರೆ ಅದು ಎಷ್ಟು ವಿಪರೀತ ಕಲ್ಪನೆ, ಎಷ್ಟು ತಪ್ಪು ಭಾವನೆಯೆಂಬುದು ಈಗ ಸ್ಪಷ್ಟವಾಗಿತ್ತು. ಅವರಿಬ್ಬರನ್ನೂ ಅರ್ಥಮಾಡಿಕೊಳ್ಳಲು ಯತ್ನಿಸದೆ ಅವರ ವಿಚಾರವಾಗಿ ಹೀನವಾಗಿ ವರ್ತಿಸುತ್ತಿದ್ದುದಕ್ಕೆ ತನ್ನನ್ನು ತಾನೇ ಹಳಿದುಕೊಂಡ. ಅದರಲ್ಲಿಯೂ ಲಲಿತ! ಪಾಪ! ಅವಳ ಆ ಮಾತಿನ್ನೂ ಅವನ ಮನಸ್ಸಿನಲ್ಲಿ ಪ್ರತಿಧ್ವನಿತವಾಗುತ್ತಿತ್ತು. "ನನ್ನ ಗತಿಯಂತೂ ಹೀಗಾಯಿತು" "ನನ್ನ ಗತಿಯಂತೂ ಹೀಗಾಯಿತು" ಲಲಿತಳದು ಹೆಣ್ಣು ಜೀವ—ಎಷ್ಟು ಕಷ್ಟ ಸಹಿಸುತ್ತಿದ್ದಳೋ ಏನೋ—ಆನಂದನಿಗೆ ಕಣ್ಣಿನಲ್ಲಿ ಹನಿ ಮೂಡಿ ರೆಪ್ಪೆ ತೇವವಾಯಿತು. ಅಂತಹ ಅಕ್ಕನನ್ನು ತಾನು ಹೀನಾಮಾನವಾಗಿ ಬೈದಿದ್ದ. ತನ್ನ ಕಿರಿತನದ ಕಲ್ಪನೆ ಆನಂದನಿಗೆ ಆಯಿತು. ಈ ನೂ[illegible]ಯ ಹೊಸತನ ರಾಮುವಿನ ಬಳುವಳಿ. ಇದುವರೆಗೂ ಬರಿಯ [illegible]ತ್ರ ಕಾಣುತ್ತಿದ್ದವನಿಗೆ ರಾಮು ಅದರ ಮೂಲ ಬೆಂಕಿಯನ್ನು [illegible] ಈ ವಿಚಾರ ಕ್ರಾಂತಿಯಿಂದ ಆನಂದನಿಗೆ ಕಳೆದು ಹೋದ [illegible]ವಾಗಿ ಕೊಂಚಕೊಂಚವಾಗಿ ಮನಸ್ಸಿಗೆ ಸಮಾಧಾನವಾಗುತ್ತಿ[illegible] ಕೊರೆ[illegible]ತ್ತಿದ್ದ ಹಿಂದಿನ ನಿರಾಶಾವಾದ, ನಿರಸಸ ಮನೋಭಾವ ಎಲ್ಲಿಯೋ ಮಣ್ಣಾ[illegible]. ಅದರ ಬದಲಿಗೆ ಒಂದು ಹೊಸ ದೃಷ್ಟಿ, ಹೊಸ ಭಾವನೆ. ಆನಂದನಿಗೊಂದು ಹೃದಯ ಬಂದಿತ್ತು. ಆ ಹೊಸ ಹೃದಯದ ಪ್ರೇಮದ ಅಳತೆಯಿಂದ ಎಲ್ಲವನ್ನೂ ಅಳೆಯುವದನ್ನು ಕೊಂಚಕೊಂಚವಾಗಿ ಕಲಿಯುತ್ತಿದ್ದ.

ರಾತ್ರಿಯೆಲ್ಲಾ ನಾಯಕರ ಗುಪ್ತ ಸಮಿತಿಯ ಸಭೆ ನಡೆಯಿತು. ಮುಂದಿನ ಕಾರ್ಯಕ್ರಮದ ನಿಯೋಜನೆ ನಡೆದಾಗ ಆನಂದ ತಾನು ಸಿದ್ಧಗೊಳಿಸಿದ್ದ ಹಳ್ಳಿಯ ಯೋಜನೆಯನ್ನು, ಅದು ನಡೆಯುತ್ತಿರುವ ರೀತಿಯನ್ನು ವಿವರಿಸಿದ. ಮರುದಿನ ಬೆಳಿಗ್ಗೆಯೇ ಆನಂದನೊಂದು ಗುಂಪಿನ ಜತೆಗೆ ಹೊರಡಬೇಕೆಂದು ಸಭೆಯಲ್ಲಿ ತೀರ್ಮಾನಿಸಿದರು. ಸಭೆ ಮುಗಿಯುವ

ವೇಳೆಗಾಗಲೇ ಬೆಳಿಗ್ಗೆ ಏಳು ಗಂಟೆಯಾಗಿ ಹೋಗಿತ್ತು. ಇನ್ನು ಮನೆಗೆ ಹೋಗಿ ಬರುವುದೆಂದರೆ ಹೊತ್ತಾಗುತ್ತದೆಂದು ಆನಂದ ಮನೆಗೆ ಹೋಗದೆಯೇ ಪ್ರವಾಸಕ್ಕೆ ಹೊರಟುಬಿಟ್ಟ. ತನ್ನ ಮನೆಗೆ ಹೋಗಿ ತಿಳಿಸಲೆಂದು ಒಬ್ಬ ಸ್ವಯಂಸೇವಕನಿಗೆ ತಿಳಿಸಿದ.

ಪಾರ್ವತಮ್ಮನವರೂ ಲಲಿತಳೂ ಆನಂದನಿಗಾಗಿ ಕಾದು ಕಾದ. ಬೇಸತ್ತರು ಆನಂದನಿಗಾಗಿ ಇಟ್ಟಿದ್ದ ಕಾಫಿ ತಣ್ಣಗಾಗಿ ಕೊರೆಯುತ್ತಿತ್ತು. ಊಟದ ಹೊತ್ತಾದರೂ ಅವನ ಸುಳಿವೇ ಇಲ್ಲ. ಈಗ ಬರಬಹುದು, ಆಗ ಬರಬಹುದೆಂದು ಕಾದು ನೋಡಿದರು. ಮನೆಯ ಮುಂದೆ ನಿಂತು ನಿಂತು ಅವನ ದಾರಿ ಕಾದು ಲಲಿತಳಿಗೆ ಕಾಲು ಸೋತುಹೋಗಿತ್ತು. ಮೆರವಣಿಗೆಯಲ್ಲಿ ಪ್ರತಿದಿನವೂ ಮುಂದೆ ಬರುತ್ತಿದ್ದವನು ಈ ದಿನ ಅವನ ನೆರಳು ಕೂಡ ಇಲ್ಲ. ಇಬ್ಬರಿಗೂ ಯೋಚನೆ ಹತ್ತಿತು. ಆನಂದನೇನೋ ಕಾಲವಲ್ಲದ ಕಾಲಕ್ಕೆ ಬರುವುದು ರೂಢಿ. ಆದರೆ ಅವರ ಮನಸ್ಸು ಕೇಳಲೊಲ್ಲದು. ಲಲಿತಳಿಗೆ ಪಾರ್ವತಮ್ಮನವರಿಗಾದಷ್ಟು ಗಾಬರಿಯಾಗಲಿಲ್ಲ. ಆದರೂ ಕಳವಳ ಮಾತ್ರ ಒಳಗೆ ಕುದಿಯುತ್ತಿತ್ತು.

ಸಂಜೆಯಾದರೂ ಆನಂದನ ಸುಳಿವೇ ಇಲ್ಲದೇ ಹೋಗಲು ಲಲಿತಳಿಗೂ ವಿಪರೀತ ಗಾಬರಿಯಾಯಿತು. ಪಾರ್ವತಮ್ಮನವರಂತೂ ಒಂದೇ ಸಮನಾಗಿ ವಿಲವಿಲನೆ ಒದ್ದಾಡುತ್ತಿದ್ದರು. ನಿಮಿಷ ನಿಮಿಷಕ್ಕೂ ಬಾಗಿಲಿಗೆ ಬಂದು ನಿಂತು ನೋಡುವರು. ದಾರಿಯಲ್ಲಿ ಅಷ್ಟು ದೂರ ಹೋಗಿ ನೋಡಿ ಬರುವರು. ನಿರಾಶೆಯಿಂದ ಸಪ್ಪೆ ಮೋರೆ ಹಾಕಿಕೊಂಡು ಮನೆಗೆ ಬಂದು "ಇನ್ನೂ ಬರಲಿಲ್ಲ ಕಣೇ ಲಲಿತು" ಎನ್ನುತ್ತಿದ್ದರು. ಲಲಿತಳಿಗೂ ಉತ್ತರ ಕೊಟ್ಟು ಸಾಕಾಗಿತ್ತು —ಪ್ರತಿಬಾರಿಯೂ ಅದೇ ಪ್ರಶ್ನೆ ಅದೇ ಉತ್ತರ—"ಇನ್ನೇನು ಬರಬಹುದಮ್ಮ ಏನು ಕೆಲಸವೋ ಏನೋ" ಎನ್ನುತ್ತಿದ್ದಳು. ಪಾರ್ವತಮ್ಮನವರೊಂದು ನಿಟ್ಟುಸಿರು ಬಿಟ್ಟು ಒಳಮನೆಗೆ ಹೋಗುತ್ತಿದ್ದರು. ಮತ್ತೆ ಒಂದೆರಡು ನಿಮಿಷ ವಾಯಿತೆಂದರೆ ಬಾಗಿಲು ಕಾದು ಸಪ್ಪೆ ಮೋರೆಯಿಂದ "ಯಾಕೋ ಇನ್ನೂ ಬರಲಿಲ್ಲ ನೋಡು. ನನಗೆ ಯಾಕೋ ಬಹಳ ಗಾಬರಿ ಲಲಿತು. ಏನೋ ನಡುಕ! ಹೋಗಿ ನೋಡಿಕೊಂಡಾದರೂ ಬರಲೇ?" ಎಂದು ವಿದ್ಯಾರ್ಥಿ

ಮುಪ್ಪರದ ಕಚೇರಿಗೆ ಹೊರಡಲು ಹವಣಿಸುತ್ತಿದ್ದರು. ಆಗ ಲಲಿತ ಬಹಳ ಪ್ರಯಾಸದಿಂದ ಅವರನ್ನು ಸಮಾಧಾನಪಡಿಸುತ್ತಿದ್ದಳು.

ರಾತ್ರಿಯಾದರೂ ಆನಂದನ ಉರುವೇ ಇಲ್ಲ ಪಾರ್ವತಮ್ಮನವರಂತೂ ಬೆಳಗಿನಿಂದ ಸಂಜೆಯ ವರೆಗೂ ನೋಡಿ ನೋಡಿ ಕುಸಿದಿದ್ದರು. ಲಲಿತಳಿಗಾಗಲಿ ಅವರಿಗಾಗಲಿ ಇನ್ನೂ ಊಟವೇ ಆಗಿರಲಿಲ್ಲ. ಆನಂದ ಬೆಳಗಿನಿಂದಲೂ ಉಪವಾಸವಿರುವಾಗ ಅವರ ಗಂಟಲಲ್ಲಿ ನೀರು ಕೂಡ ಇಳಿಯದು. ಪಾರ್ವತಮ್ಮನವರು ಸಂಜೆಯ ಸಭೆಗೂ ಹೋಗಿ ಬಂದಿದ್ದರು ಅಲ್ಲಿಯೂ ಆನಂದನು ಇರಲಿಲ್ಲ ಪೋಲೀಸಿನವರೇನಾದರೂ ಅವನನ್ನು ಹಿಡಿದುಕೊಂಡು ಹೋಗಿರಬಹುದೇ ಎಂದು ಸಂಶಯ ಬಂತು. ಆದರೆ ಉಳಿದವರನ್ನು ಬಿಟ್ಟು ಅವನನ್ನೊಬ್ಬನನ್ನು ಬಂಧಿಸಲಾರರೆಂದು ಲಲಿತ ಸಮಾಧಾನ ಹೇಳಿದಳು. ಪಾರ್ವತಮ್ಮನವರು ಕೈಯಲ್ಲಿ ರುದ್ರಾಕ್ಷಿಮಾಲೆ ಹಿಡಿದು ಜಪ ಮಾಡುತ್ತಿದ್ದವರು ಹಾಗೆಯೇ ತೂಕಡಿಸುತ್ತಿದ್ದರು. ಅಕಸ್ಮಿಕವಾಗಿ ತಮಗೆ ನಿದ್ರೆಬಂದು ಆ ಸಮಯದಲ್ಲಿ ಅವನೇನಾದರೂ ಬಂದು ಬಾಗಿಲು ತಟ್ಟಿದರೆ ಕೇಳದೇ ಹೋದೀತೆಂದು ಬಾಗಿಲಿಗೆ ಒರಗಿಕೊಂಡೇ ಕುಳಿತಿದ್ದರು. ಇಲಿಯೋ ಬೆಕ್ಕೋ ಸದ್ದು ಮಾಡಿದರೆ ಸಾಕು. ಬೆಚ್ಚಿ ಎಚ್ಚತ್ತು ದೀಪಹಾಕಿ ಸುತ್ತ ನೋಡುವರು. ಗಾಳಿಯ ಸುಳಿದಾಟದಲ್ಲಿ ತರಗೆಲೆ ಸದ್ದಾದರೆ ಬಾಗಿಲು ತೆರೆದು ಹೊರಗೆ ನೋಡುತ್ತಿದ್ದರು. ಆದರೆ ಆನಂದ ಮಾತ್ರ ಬರಲಿಲ್ಲ ಹೊರಗೆ ಗಾಳಿ ತನ್ನಂತೆ ತಾನು ಅವರನ್ನು ಲೆಕ್ಕಿಸದೆ ಬೀಸಿ ತರಗೆಲೆಗಳನ್ನುರುಳಿಸುತ್ತಿತ್ತು. ಹೊರಗಿನ ದೀಪ ಮುಸುಕು ಮುಸಕಾಗಿ ಉರಿಯುತ್ತಿತ್ತು. ಬಚ್ಚಲಿನಲ್ಲಿ ಬೆಚ್ಚಗೆ ಮಲಗಿದ್ದ ನಾಯಿಯೊಂದರ ಗೊರಕೆಯ ಸದ್ದು ರಾತ್ರಿಯ ಮೌನವನ್ನೊಡೆದು ಕಿವಿಗೆ ಬೀಳುತ್ತಿತ್ತು.

ರಾತ್ರಿಯೆಲ್ಲಾ ತಡೆದ ನಿದ್ರೆಯಿಂದ ಪಾರ್ವತಮ್ಮನವರ ಮುಖ ಬಹಳ ಕಂದಿ ಹೋಗಿತ್ತು. ಬೆಳಗಿನ ಜಾವದ ತಂಗಾಳಿ ಬೀಸಿದಾಗ ಹಾಗೆಯೇ ನಿದ್ರೆ ಬಂದಿತ್ತು. ಆದರೆ ಆಗ ಕೂಡ ಏನೋ ಕನಸಾಗಿ ಬೆದರಿ ಎಚ್ಚತ್ತು, ಬೆಳಕು ಹರಿದುದನ್ನು ಕಂಡು ಅಡಿಗೆಮನೆಯೊಳಕ್ಕೆ ಹೋದರು. ಆನಂದನಿಗಾಗಿ ಇಟ್ಟಿದ್ದ ಹಾಲಿನ ಪಾತ್ರೆ ಉರುಳಿ ಹಾಲು ಚೆಲ್ಲಿತ್ತು. ಬೆಕ್ಕು ಪೆಲ್ಲನೆ ಅದನ್ನು ಹೀರುತ್ತಿತ್ತು.

ಲಲಿತಳಿನ್ನೂ ಎದ್ದಿರಲಿಲ್ಲ. ಪಾರ್ವತಮ್ಮನವರಿಗೆ ಇನ್ನು ದುಃಖ ತಡೆಯಲಾಗಲಿಲ್ಲ. ಬಿಕ್ಕಿ ಬಿಕ್ಕಿ ಅಳುತ್ತಾ ವಿದ್ಯಾರ್ಥಿ ಮುಷ್ಕರದ ಕಾರ್ಯಾಲಯಕ್ಕೆ ಹೋಗಿ ವಿಚಾರಿಸಿದರು. ಆಗ ವಿಷಯ ತಿಳಿಯಿತು. ಆನಂದ ಊರಿನಲ್ಲಿಲ್ಲ. ಹಳ್ಳಿಗೆ ಪ್ರವಾಸ ಹೋಗಿದ್ದಾನೆ. ಬರುವುದು ಒಂದು ವಾರವಾಗಬಹುದೆಂದು. ಅದನ್ನು ಅವರಿಗೆ ತಿಳಿಸಲು ಹೇಳಿದ್ದ ಸ್ವಯಂಸೇವಕ ಮರೆತು ಬಿಟ್ಟಿದ್ದ.

ಪಾರ್ವತಮ್ಮನವರು ಅಳುತ್ತ ಮನೆಗೆ ಬಂದು ಲಲಿತಳಿಗೆಲ್ಲಾ ತಿಳಿಸಿದರು. ತಮ್ಮ ಮಾತಿಗೆ ಕೋಪಗೊಂಡು ಆನಂದ ಹೇಳದೆಯೇ ಹೊರಟು ಹೋದನೆಂದು ತಮ್ಮನ್ನು ತಾವೇ ಹಳಿದುಕೊಳ್ಳಲಾರಂಭಿಸಿದರು. ಲಲಿತ ಅವರನ್ನು ಸಮಾಧಾನಗೊಳಿಸಲು ಯತ್ನಿಸಿದರೂ ಏನೂ ಪ್ರಯೋಜನವೇ ಆಗಲಿಲ್ಲ. ಆನಂದ ಪ್ರವಾಸದಿಂದ ಹಿಂತಿರುಗುವ ವರೆಗೂ ಇಬ್ಬರಿಗೂ ಊಟವಿಲ್ಲ. ನಿದ್ರೆಯಿಲ್ಲ. ಕಾದ ಕಬ್ಬಿಣದ ತುಂಡಿನ ಮೇಲೆ ನಿಲ್ಲಿಸಿದಂತಿತ್ತು ಅವರ ಮನಸ್ಸು!

ಒಂದು ವಾರ ಕಳೆದಮೇಲೆ ಆನಂದ ಹಿಂತಿರುಗಿದಾಗ ಇಬ್ಬರಿಗೂ ಜೀವ ಬಂದಂತಾಗಿತ್ತು. ಕೆಸರು, ನದಿ, ಮಳೆ, ಗಾಳಿ ಬಿಸಿಲೆನ್ನದೆ ಒಂದೇ ಸಮನಾಗಿ ಸುತ್ತಿದ್ದುದು ಆನಂದನಿಗೆ ಬಹಳ ಆಯಾಸವಾಗಿತ್ತು. ಒಂದೊಂದು ದಿನ ಊಟ ಸಿಗುತ್ತಿತ್ತು. ಒಂದೊಂದು ದಿನವಂತೂ ಊಟ ತಿಂಡಿಗಳಿಲ್ಲದೆಯೇ ಹಳ್ಳಿಯಿಂದ ಹಳ್ಳಿಗೆ ಸಾಗಬೇಕಾಗಿತ್ತು. ಊಟ ಸಿಕ್ಕಿದರೂ ಸಮಯವಲ್ಲದ ಸಮಯದಲ್ಲಿ. ರಾತ್ರಿ ತಂಗಲು ಜಾಗ ಸಿಕ್ಕಿದರುಂಟು. ಇಲ್ಲದಿದ್ದರೆ ಇಲ್ಲ. ಜತೆಗೆ ಹಳ್ಳಿ ಹಳ್ಳಿಯಲ್ಲಿಯೂ ಮಾತಾಡುವ ಸುಸ್ತು. ಇವೆಲ್ಲದರಿಂದ ಆನಂದನ ಮೈಗೆ ಬಹಳ ಅಪಥ್ಯವಾಗಿ ಹೋಗಿತ್ತು. ಗುರುತಿಸಲಾರದಷ್ಟು ಇಳಿದು ಹೋಗಿದ್ದ. ಮುಖದ ಮೇಲಂತೂ ಆ ಏಳು ದಿನಗಳಲ್ಲೇ ಏಳು ವರುಷ ಮೂಡಿತ್ತು!

೮

ಹಳ್ಳಿಯ ಪ್ರವಾಸ ಮುಗಿಸಿ ಬಂದ ಮರುದಿನ ಸಂಜೆ ಸಭೆಯಾದೊಡನೆಯೇ ಆನಂದ ನೇರವಾಗಿ ಮನೆಗೆ ಬಂದ. ಹಳ್ಳಿಯ ಪ್ರವಾಸದಿಂದ

ಮೈಗೆ ವಿಪರೀತ ಅಸಹ್ಯವಾಗಿ, ಈಗ ಮೈ ಕೊಂಚ ಬೆಚ್ಚಗಾಗಿತ್ತು. ಜ್ವರ ಕಾಣಿಸಿಕೊಳ್ಳಲೋ ಬೇಡವೋ ಎನ್ನುವಂತಿತ್ತು. ಕೊಂಚ ನಿದ್ರೆಮಾಡಿದರೆ ಸರಿಹೋದೀತೆಂದು ಆನಂದ ತನ್ನ ಕೋಣೆಯೊಳಕ್ಕೆ ಹೋಗಿ ಮಲಗಿಕೊಳ್ಳಲು ಹವಣಿಸುತ್ತಿದ್ದ. ಅಷ್ಟರಲ್ಲೇ ಹೊರಗೆ ಯಾರೋ ಕೂಗಿದರು. ಲಲಿತ ಗೊಣಗುತ್ತಾ ಬಂದು ಆನಂದನಿಗೆ ತಿಳಿಸಿದಳು. ಸ್ವಯಂಸೇವಕ ನಾಯಕನಿಂದ ಕರೆ ತಂದಿದ್ದ. ನಾಯಕರೆಲ್ಲರ ಬಂಧನಕ್ಕಾಗಿ ವಾರಂಟು ಸಿದ್ಧಗೊಳಿಸಿದಾರೆ ಆದುದರಿಂದ ನಾಯಕರಲ್ಲಿ ಒಬ್ಬಿಬ್ಬರಾದರೂ ಗುಪ್ತವಾಗಿರಬೇಕು ಎಂದು ನಾಯಕ ಸಲಹೆ ಕಳುಹಿಸಿ ಆನಂದನ ಅಭಿಪ್ರಾಯ ಕೇಳಿದ್ದ. ಆನಂದನೇ ಗುಪ್ತವಾಗಿದ್ದುಕೊಂಡು ಚಳುವಳಿಯನ್ನು ಮುನ್ನಡೆಸಲಿ ಎಂದು ನಾಯಕನ ಅಭಿಮತ. ಆದರೆ ಆನಂದನಿಗೆ ಅದು ಸರಿದೋರಲಿಲ್ಲ. ನಾವು ಮಾಡುವ ಕೆಲಸವನ್ನಷ್ಟು ಮಾಡೋಣ. ಬಂಧನವಾದರೆ ಚಿಂತೆಯಿಲ್ಲ ಎಂದು ಅವನ ವಾದ. ಅಂತೂ ಅದನ್ನು ನಾಯಕನೊಂದಿಗೇ ಚರ್ಚೆ ಮಾಡುವುದು ಸರಿ ಎಂದುಕೊಂಡು ಬಟ್ಟೆ ಹಾಕಿಕೊಂಡು ಹೊರಟ. ಬೇಗ ಬಂದುಬಿಡುತ್ತೇನೆಂದು ಲಲಿತಳಿಗೆ ಹೇಳಿ ಮನೆ ಬಿಟ್ಟ. "ಬೇಗನೆಂದರೆ ಇನ್ನು ನಾಳೆಯೋ ಏನೋ" ಎಂದುಕೊಂಡು ಲಲಿತ ಬಾಗಿಲು ಹಾಕಿಕೊಂಡಳು.

ಕಾರ್ಯಾಲಯದಲ್ಲಿ ನಾಯಕ ಆನಂದನಿಗಾಗಿ ಕಾದಿದ್ದ. ಆನಂದ ಒಳಬಂದೊಡನೆಯೇ ಗುಪ್ತಸಭೆ ಆರಂಭವಾಯಿತು. ಎಲ್ಲರೂ ಆನಂದನನ್ನು ಒತ್ತಾಯ ಮಾಡುವವರೇ. ಆದರೆ ಅವನು ಮಾತ್ರ ಏನು ಮಾಡಿದರೂ ಗುಪ್ತವಾಗಿರಲು ಒಪ್ಪಲಿಲ್ಲ. ಯಾರು ಯಾರು ಎಷ್ಟು ಹೇಳಿದರೂ ಜಗ್ಗಲಿಲ್ಲ.

"ಹೊರಗೆ ಚಳುವಳಿ ಮುಂದೆಯೂ ನಡೆಯಬೇಕಾದರೆ ಯಾರಾದರೂ ಇರಲೇಬೇಕು. ನೀವಿದ್ದರೂ ಸರಿ, ನಾನಿದ್ದರೂ ಸರಿ—ಯಾರಾದರೂ ಒಬ್ಬರು ಇದ್ದೇ ತೀರಬೇಕು. ಇಲ್ಲದಿದ್ದರೆ ಚಳುವಳಿ ನಿಂತು ಹೋಗುವುದು" ಎಂದ ನಾಯಕ.

"ನಾವು ಇಬ್ಬರಿಲ್ಲದೇ ಹೋದರೆ ಚಳುವಳಿ ನಿಂತು ಹೋಗುತ್ತದೆಂಬುದು ಶುದ್ಧ ಅಸಂಭವ. ಇಬ್ಬರು ವ್ಯಕ್ತಿಗಳ ಮೇಲೆಯೇ ಹೊಂದಿಕೊಳ್ಳುವ ಚಳುವಳಿಯಿಂದ ಏನು ತಾನೇ ಸಾಧ್ಯ? ಅದು ಸಫಲವಾಗುವು

ವದೆನ್ನುವ ಭರವಸೆಯಾದರೂ ಎಲ್ಲಿ? ನಾಳೆಯು ದಿನ ನಾವಿಬ್ಬರೂ ಸೆರೆಮನೆಗೆ ಹೋದರೆ ನಮ್ಮ ಜಾಗಕ್ಕೆ ವಿದ್ಯಾರ್ಥಿಗಳಿಂದಲೇ ಇನ್ನಿಬ್ಬರು ಬರದಿದ್ದರೆ ಮುಷ್ಕರದಿಂದ ಏನಾದ ಹಾಗಾಯಿತು ?" ಎಂದು ಸವಾಲು ಹಾಕಿದ ಆನಂದ

ನಾಯಕನಿಗೆ ಈ ಸವಾಲಿಗೆ ಜವಾಬೇನು ಕೊಡಲು ತೋಚಲಿಲ್ಲ.

ಲಲಿತ ಯೋಚಿಸಿದಂತೆಯೇ ಆನಂದ ರಾತ್ರಿ ಮನೆಗೆ ಹಿಂತಿರುಗಲೇ ಇಲ್ಲ. ನಾಯಕರ ಬಂಧನವಾದ ಮೇಲೆ ವಿದ್ಯಾರ್ಥಿಗಳು ಏನು ಮಾಡಬೇಕು, ಸ್ವಯಂಸೇವಕಪಡೆ ಯಾವ ರೀತಿಯಲ್ಲಿ ಕಾರ್ಯ ನಿರ್ವಹಿಸಬೇಕು, ಚಳುವಳಿ ಹೇಗೆ ನಡೆಸಬೇಕೆಂಬುದನ್ನು ವಿಶದವಾಗಿ ಚರ್ಚೆಮಾಡಿ, ಸ್ವಯಂಸೇವಕರಿಗೆ ಅದನ್ನು ವಿವರಿಸಿ ಕಾರ್ಯನಿರ್ವಾಹಕ ಸಮಿತಿಯೊಂದನ್ನೇರ್ಪಡಿಸಿದರು. ಈ ಚರ್ಚೆ, ವಿವರಣೆಗಳಲ್ಲೇ ರಾತ್ರಿ ಬಹಳ ಹೊತ್ತಾದುದರಿಂದ ಆನಂದ ಉಳಿದವರೊಂದಿಗೆ ಅಲ್ಲಿಯೇ ಮಲಗಿಬಿಟ್ಟ.

ಬೆಳಗ್ಗೆ ಆನಂದನೆದ್ದಾಗ ಸುಮಾರು ಎಂಟು ಗಂಟೆಯ ಸಮಯ. ಹೊತ್ತು ಬಹಳವಾಯಿತೆಂದುಕೊಂಡು ಎದ್ದು ಮುಖ ತೊಳೆದು ಮನೆಯ ಕಡೆಗೆ ಹೊರಟ. ಈಗಲೋ ಆಗಲೋ ತನ್ನೆಲ್ಲರ ಬಂಧನವೂ ಆಗಿಹೋಗುವು ದೆಂದು ಅವನಿಗೆ ಗೊತ್ತಿತ್ತು. ಬೇಗಬೇಗ ಹೆಜ್ಜೆಯಿಟ್ಟುಕೊಂಡು ಮನೆಯ ಕಡೆಗೆ ಹೋಗುತ್ತಿದ್ದಂತೆ ನಾಲ್ಕು ಜನ ಸರ್ಕಾರದ ಗುಪ್ತಚಾರರು ಅವನನ್ನು ಹಿಂಬಾಲಿಸಿದರು. ಅವರು ಎಂದಿನಂತೆಯೇ ಅಂದೂ ಹಿಂಬಾಲಿಸುತ್ತಿರು ವರೆಂದು ಆನಂದ ನೇರವಾಗಿ ಮನೆಗೆ ಹೊರಟುಹೋದ. ಮನೆ ತಲುಪಿದರೆ ಅಲ್ಲಿ ಒಬ್ಬ ಕಾದಿದ್ದ.

ಲಲಿತಳೂ ಪಾರ್ವತಮ್ಮನವರೂ ಆನಂದ ಬರುವುದನ್ನೇ ಕಾದು ಬಾಗಿಲಲ್ಲೇ ನಿಂತಿದ್ದರು. ಕಾಫಿ ಕಾಸಿಟ್ಟು ಬಿಸಿಯಾಗಿ ಒಂದಿಷ್ಟು ತಿಂಡಿ ಯನ್ನು ಮಾಡಿ ಇಟ್ಟಿದ್ದರು. ರಸ್ತೆಯಲ್ಲಿ ಅವನನ್ನು ಕಂಡೊಡನೆಯೇ ಅವರೆದೆ ತುಂಬಿ ಬಂತು. ಇನ್ನೂ ಮನೆಗೆ ಹತ್ತು ಹೆಜ್ಜೆಯಿದೆಯೆನುವಾಗಲೇ ಪಾರ್ವತಮ್ಮನವರು ಮಾತನಾಡಲಾರಂಭಿಸಿದರು.

"ಯಾಕೋ ಆನಂದ, ರಾತ್ರಿ ಬರಲೇ ಇಲ್ಲ" ಎಂದರು

"ಏನೋ ಕೊಂಚ ಕೆಲಸವಿತ್ತಮ್ಮ" ಎನ್ನುತ್ತಾ ಆನಂದ ಹತ್ತಿರ ಬಂದು ಮೆಟ್ಟಿಲ ಮೇಲೊಂದು ಕಾಲಿಟ್ಟ. ಅಷ್ಟರಲ್ಲಿ ಮನೆಯ ಬಳಿ ಕಾದಿದ್ದ

ಸಿ. ಐ. ಡಿ. ಇನಸ್ಪೆಕ್ಟರರು ಹತ್ತಿರ ಬಂದು "ಮಿಸ್ಟರ ಆನಂದ" ಎಂದ. ಆನಂದ ಹಿಂತಿರುಗಿ ಅವನ ಕಡೆ ನೋಡಿದ. ಕೂಡಲೇ ಅರ್ಥವಾಯಿತು. ಕ್ಷಣಕಾಲ ತಲೆ ಶೂನ್ಯವಾಯಿತು. ಜಗತ್ತೆಲ್ಲ ಶೂನ್ಯ, ತಾನೂ ಶೂನ್ಯನೆಂದು ತೋರಿತು. ಎಲ್ಲವೂ ಮಂಜಾಯಿತು. ಆದರೆ ಮರುನಿಮಿಷ ಚೇತರಿಸಿ ಕೊಂಡು ಆತನ ಕಡೆಗೆ ತಿರುಗಿದ.

"ಏನು ? —ನೀವು ಯಾರು ? " ಎಂದ ಒಳಗೇ ನಗುತ್ತಾ.

"ನಿಮ್ಮನ್ನು ಬಂಧಿಸಿದ್ದೇನೆ." ಎಂದ ಸಿ. ಐ ಡಿ ಇನಸ್ಪೆಕ್ಟರ.

ಆನಂದ ನಗುನಗುತ್ತಾ ತಾಯಿಯ ಕಡೆಗೆ ತಿರುಗಿದ

"ಅಮ್ಮಾ ಹೋಗಿಬರುತ್ತೇನಮ್ಮ. ಬೇಗನೆ ಬಿಡುಗಡೆಯಾಗುವಂತೆ ಹರಸು" ಎಂದ

ಪಾರ್ವತಮ್ಮನವರಿಗೆ ಸಿಡಿಲು ಎರಗಿದಂತಾಗಿ ಚೀರಿದರು. ಆನಂದನೇ ಅವರಿಗೆ ಸಮಾಧಾನ ಹೇಳಲಾರಂಭಿಸಿದ. ಲಲಿತಳಂತೂ ದಿಕ್ಕುಗಾಣದವಳಂತೆ ಕಕ್ಕಾವಿಕ್ಕಿಯಾಗಿ ನಿಂತಿದ್ದಳು.

"ಜೈಲಿನಲ್ಲೇನೂ ಕಷ್ಟವಿಲ್ಲಮ್ಮ. ಎಲ್ಲವೂ ಸುಖವಾಗಿವೆಯಂತೆ. ನೀನೂ ಆಗಾಗ ಬಂದು ನೋಡಿಕೊಂಡು ಬರಬಹುದು. ಅಳಬೇಡಮ್ಮ- ಲಲಿತಾ, ಹೋಗಿಬರುತ್ತೇನೆ, ಅಳಬೇಡ. ನನ್ನನ್ನು ಮರೆತುಬಿಡಬೇಡ" ಎನ್ನುತ್ತಾ ಆನಂದ ಪೋಲೀಸ ಇನಸ್ಪೆಕ್ಟರನೊಂದಿಗೆ ಹೊರಟುಹೋದ.

ಆ ದಿನವೆಲ್ಲಾ ಸ್ಟೇಶನಿನಿಂದ ಸ್ಟೇಶನಿಗೆ ಆನಂದನನ್ನು ಕರದೊಯ್ದರು. ಹೇಗಾದರೂ ಸರಿ ಅವನಿಂದ ಕೊಂಚವಾದರೂ ಸುದ್ದಿ ಸಂಗ್ರಹಿಸಬೇಕೆಂದು ಪೋಲೀಸಿನವರ ಹಟ. ಆದಕ್ಕಾಗಿ ನೂರು ಬಗೆಯಾಗಿ ಪ್ರಶ್ನೆ ಕೇಳಿದರು. ತಿರುಗಮುರುಗ ಮಾಡಿ ಒಂದೇ ಪ್ರಶ್ನೆಯನ್ನು ಹತ್ತುಬಾರಿ ಕೇಳಿದರು ಆದರೆ ಆನಂದ ಆವರ ಈ ಕುತಂತ್ರಕ್ಕೆ ಬಲಿಬೀಳಲಿಲ್ಲ. ಅವರು ಕೇಳಿದ ಪ್ರತಿ ಪ್ರಶ್ನೆಗೂ ಚಾಕಚಕ್ಯತೆಯಿಂದ ಉತ್ತರ ಕೊಟ್ಟ. ಆದರೆ ಸಂಜೆಯ ವೇಳೆಗೆ ಉತ್ತರ ಕೊಟ್ಟುಕೊಟ್ಟು ಬೇಸರವಾಗಿ ಹೋಗಿತ್ತು. ರಾತ್ರಿಗಾದರೂ ಜೈಲಿಗೆ ಒಯ್ಯುವರೆಂದುಕೊಂಡಿದ್ದ. ಆದರೆ ಜೈಲಿಗೆ ಕರೆದೊಯ್ಯುವ ಬದಲು ರಾತ್ರಿ ಲಾಕಪ್ಪಿನಲ್ಲಿಯೇ ಉಳಿಸಿಕೊಂಡರು.

ಮಧ್ಯಾಹ್ನವೆಲ್ಲಾ ಪಾರ್ವತಮ್ಮನವರು ಒದ್ದಾಡಿದರು. ಆನಂದ ತಪ್ಪೊಂದು ಅನಿರೀಕ್ಷಿತವಾಗಿ ಹೊರಟುಹೋದನಲ್ಲಾ—ಸೆರೆಯಾಗಿ ಹೋಯಿತಲ್ಲಾ—ಇನ್ನೇನು ಗತಿಯೆಂದು ದಿಕ್ಕೇ ತೋಚದಂತಾಡಿದರು. ಅವನನ್ನ ಇನ್ನೊಂದು ಬಾರಿ ನೋಡಬೇಕೆಂದು ಆಸೆ. ಆದರೆ ಅವನೆಲ್ಲಿರುವನು. ಪೋಲೀಸಿನವರು ಅವನನ್ನು ಎಲ್ಲಿಟ್ಟಿರುವರೆಂಬುದೊಂದೂ ತಿಳಿಯದು. ಇದರಿಂದ ಅವರಿಗೆ ಏನು ಮಾಡಲೂ ತೋಚದು. ರಾತ್ರಿಯ ವೇಳೆಗೊಬ್ಬ ಪೋಲೀಸಿನವನು ಬಂದು ಬೆಳಗ್ಗೆ ಲಕ್ಷ್ಮೀಪುರಂ ಸ್ಟೇಶನ್ನಿಗೆ ಬಂದು ಆನಂದನನ್ನು ನೋಡಬಹುದೆಂದು ಹೇಳಿ ಹೋದ. ಪಾರ್ವತಮ್ಮನವರಿಗೆ ರಾತ್ರಿಯೆಲ್ಲಾ ಪೇಚಾಟ. ಏನು ಮಾಡಿದರೂ ನಿದ್ರೆ ಬರಲೊಲ್ಲದು. ಕೊಂಚ ಜೋಂಪು ಹಿಡಿದರೆ ಕೆಟ್ಟ ಕನಸುಗಳು. ಲಲಿತಳ ಸ್ಥಿತಿಯಂತೂ ಇನ್ನೂ ಕೇಡು—ಒಂದು ಕಡೆ ಮನಸ್ಸಿನ ದುಃಖ. ತಾಯಿಯೆದುರಿಗೆ ಅತ್ತರೆ ತಾಯಿಗೇ ಅಧೈರ್ಯವಾದೀತೆಂಬ ಹೆದರಿಕೆಯಿಂದ ಮನಸ್ಸಿನಲ್ಲೇ ಕೊರಗುತ್ತಿದ್ದಳು. ಇದರ ಜತೆಗೆ ನರಸಿಂಹಯ್ಯನವರ ಉಗ್ರರೂಪ. ಮನಸ್ವೀ ರೇಗಾಡಿದರು ನರಸಿಂಹಯ್ಯ. ತಪ್ಪನ್ನೆಲ್ಲಾ ಲಲಿತಳ ಮೇಲೆಯೇ ಹೊರಿಸಿ ಅವಳನ್ನು ಕಂಡುತೆಲ್ಲಾ ಬೈದರು. ಅದನ್ನೆಲ್ಲಾ ಲಲಿತ ತೆಪ್ಪಗೆ ಸಹಿಸಿಕೊಂಡಿದ್ದಳು! ತಮ್ಮನ ಬಂಧನದ ದುಃಖ ಒಂದು ಕಡೆ, ಗಂಡನ ಕ್ರೌರ್ಯ ಒಂದು ಕಡೆ – ಎರಡು ಮುಳ್ಳುಗಳು ಎದೆಗೆ ಚುಚ್ಚಿದ ಹಕ್ಕಿಯಂತಾಗಿದ್ದಳು ಲಲಿತ!

ರಾತ್ರಿಯೆಲ್ಲಾ ಆನಂದ ಲಾಕಪ್ಪಿನಲ್ಲಿಯೇ ಇದ್ದ. ಆ ಲಾಕಪ್ಪಿನ ಸ್ಥಿತಿಯೋ ದೇವರಿಗೇ ಗೊತ್ತು. ಪೋಲೀಸ್ ಸ್ಟೇಶನನ್ನು ಕಟ್ಟಿದಾಗಿನಿಂದ ಕಸಪೊರಕೆಯನ್ನೇ ಕಂಡಿತ್ತೋ ಇಲ್ಲವೋ—ಮೂರು ನಾಲ್ಕು ಅಂಗುಲದಷ್ಟು ಧೂಳು ಕುಳಿತಿತ್ತು. ಸೊಳ್ಳೆಗಳು ಅಲ್ಲಿಯೇ ಸಂಸಾರ ಹೂಡಿದ್ದುವು. ಅವುಗಳ ಗಾನ, ನರ್ತನದ ಜತೆಗೆ ಆಲಿಂಗನ, ಚುಂಬನಗಳನ್ನು ಸಹಿಸಬೇಕಾಗಿತ್ತು. ಆ ಧೂಳಿನ ಮೇಲೆ ಹೇಗೆ ಮಲಗುವುದು ಎಂದು ಆನಂದ ಒಂದೇ ಸಮನಾಗಿ ಯೋಚಿಸುತ್ತಾ ಕುಳಿತಿದ್ದ. ಸುತ್ತಲೂ ಒಮ್ಮೆ ತಿರುಗಿ ನೋಡಿದ. ಲಾಕಪ್ಪಿನ ಕಬ್ಬಿಣದ ಬಾಗಿಲಿಗೊಂದು ದಪ್ಪ ಬೀಗ ಹಾಕಿದ್ದರು. ಬಾಗಿಲಿನ ಸರಳುಗಳ ಸಂದಿನಿಂದ ಬೆಳಕು ಬಂದು ಲಾಕಪ್ಪಿನಲ್ಲಿ ಕೆಲಭಾಗದ ಮೇಲೆ ಬೀಳುತ್ತಿತ್ತು. ಹೊರಗಡೆ ಪೋಲೀಸಿನವರಿಬ್ಬರು ಬಾರು ಮಾಡಿದ ಬಂದೂಕುಗಳನ್ನಿಟ್ಟು

ಕೊಂಡು ತೂಕಡಿಸುತ್ತಿದ್ದರು. ಅವರ ಸ್ಥಿತಿ ಕಂಡು ಆನಂದನಿಗೆ ಮೊದಲು ನಗೆ ಬಂತು. ಮತ್ತೆ ಕರುಣೆ ಕಡೆಯಿತು. ಒಬ್ಬ ತನ್ನ ಉದ್ದನೆಯ ಗಡ್ಡವನ್ನು ಸುಮ್ಮನೆ ಕೆರೆದುಕೊಳ್ಳುತ್ತಿದ್ದ. ಸ್ನಾನ ಮಾಡಿ ಎಷ್ಟು ದಿನಗಳಾಗಿತ್ತೋ?–ಗಡ್ಡದಲ್ಲಿ ಹೇನು ಸೇರಿತ್ತೋ ಏನೋ?—ಮತ್ತೊಬ್ಬ ತನ್ನ ಹರಿದ ನಿಲುವಂಗಿಯನ್ನೇ ನೆಲದ ಮೇಲೆ ಹಾಸಿಕೊಂಡು ಅದರ ಮೇಲೆ ಉರುಳಿಕೊಂಡಿದ್ದ ಕನವರಿಸಿಕೊಳ್ಳುತ್ತಿದ್ದ—ಏನೇನೋ ಮಾತಾಡುತ್ತಿದ್ದ—"ನಂಬರ್ ೭೧೯ ಸಾರ್ ಡ್ಯೂಟಿ ಮೇಲಿದ್ದೆ ಸಾರ್—ಸಬ್ ಇನಸ್ಪೆಕ್ಟರ ಸಾಹೇಬ್ರು ಸಾರ್ ಗೊತ್ತಿಲ್ಲ ಸಾರ್-ಹೋಟಲಿನಲ್ಲಿ ಸಾರ್—ಬರೀ ಮೂಲಂಗಿ ಹುಳಿ ಸಾರ್–ಆ ಭಾಡ್ಕ್ಯ ತಪ್ಪಿಸಿಕೊಂಡ ಸಾರ್—ತಿಮ್ಮಯ್ಯ ಬೀಟ್ಟ—ಕೈದಿಗೆ ಜ್ವರ ಸಾರ್." ಆನಂದನಿಗೆ ಅವನನ್ನು ಕಂಡು ಕಣ್ಣಲ್ಲಿ ನೀರುಕ್ಕಿತು. ಪಾಪ! ಒಂದು ಹತ್ತು ಹದಿನೈದು ರೂಪಾಯಿಗಳಿಗಾಗಿ ಹಗಲು ರಾತ್ರಿಯೆನ್ನದೆ ದುಡಿದು ವಿರಾಮವೇ ಇಲ್ಲದೇ ಸಾಯುವರಲ್ಲ—ಇವರಿಗೆ ಜೀವನದಲ್ಲಿ ಯಾವ ಸುಖ ತಾನೇ ಇದ್ದೀತು ಎಂದು ಮರುಗಿದ. ಆಕಳಿಕೆ ಬಂತು. ಮಲಗೋಣವೆಂದು ಒಳಕ್ಕೆ ತಿರುಗಿದರೆ ಮತ್ತೆ ಅದೇ ಗೋಳು. ಆ ಧೂಳಿನ ರಾಶಿಯಲ್ಲಿ ಮಲಗುವುದಾದರೂ ಹೇಗೆ? ಅದನ್ನು ಗುಡಿಸಲು ಪೊರಕೆ ಬೇಕು. ಪಾಪ! ಇನ್ನು ಆ ಪೋಲೀಸಿನವರನ್ನೆಬ್ಬಿಸಿ ಅವರಿಗೆ ತೊಂದರೆ ಕೊಡಬೇಕಲ್ಲಾ ಎಂದುಕೊಂಡು ಹಾಗೆಯೇ ಇದ್ದುದರಲ್ಲಿಯೇ ಹೇಗೋ ಸವರಿಸಿಕೊಂಡು ಮಲಗಲು ಯತ್ನಿಸಿದ. ಆನಂದ ಮತ್ತೊಬ್ಬರಿಗಾಗಿ ತನ್ನ ಸುಖಬಿಟ್ಟುಕೊಟ್ಟುದು ಇದೇ ಮೊದಲ ಬಾರಿ.

ಎಷ್ಟು ಪ್ರಯತ್ನಿಸಿದರೂ ನಿದ್ರೆ ಬರಲಿಲ್ಲ. ಜಾಗ ಹೊಸದು. ಒಬ್ಬನೇ ಒಬ್ಬ. ಜತೆಗೆ ಒಂದು ಬಗೆಯ ಭೀತಿ. ನಡುರಾತ್ರಿಯಲ್ಲಿ ಎಬ್ಬಿಸಿ ಪೋಲೀಸಿನವರು ಏನಾದರೂ ಹಿಂಸೆ ಕೊಡಬಹುದೆನ್ನುವ ಭೀತಿ—ಶಂಕೆ. ಇದೆಲ್ಲಕ್ಕೂ ತಿಲಕವಿಟ್ಟಂತೆ ಆ ಲಾಕಪ್ಪಿನ ವಾತಾವರಣ. ಮೂಲೆಯಲ್ಲಿದ್ದ ಬಚ್ಚಲೊಂದೇ ಹೊರಜಗತ್ತಿಗೂ ಲಾಕಪ್ಪಿಗೂ ಇದ್ದ ಸಂಬಂಧ. ಆ ಬಚ್ಚಲಿನಿಂದ ಹಲ್ಲಿಹುಳುಗಳು ಹೊರಕ್ಕೂ ಒಳಕ್ಕೂ ಓಡಾಡುತ್ತಿದ್ದವು. ಮೇಲೆಲ್ಲಾ ತಾರಸಿ. ಗಾಳಿ ಬರಲು ಕೂಡ ಒಂದು ಕಿಟಕಿಯಾದರೂ ಇರಲಿಲ್ಲ. ಒಂದು ಕಂಡಿಯೂ ಇಲ್ಲ ಆ ತಾರಸಿಯಲ್ಲಿ ಕೂಡ ಒಂದು ಜೇಡ ತನ್ನ

ಸಾಮ್ರಾಜ್ಯ ವಿಸ್ತರಿಸಿತ್ತು. ಆಗಾಗ ನೊಣಗಳು, ಸೊಳ್ಳೆಗಳು, ಹುಳುಗಳು, ಬಂದು ಆ ಬಲೆಯಲ್ಲಿ ಸಿಕ್ಕಿ ಒದ್ದಾಡಿ ಜೇಡನಿಗೆ ತುತ್ತಾಗುತ್ತಿದ್ದುವು. ಸೆರೆಯೊಳಗೂ ಒಂದು ಸೆರೆ! ಆ ಲಾಕಪ್ಪಿನಲ್ಲಿ ಕೂಡ ಒಂದು ಗುಬ್ಬಚ್ಚಿ ಹೇಗೋ ಗೂಡು ಮಾಡಿಕೊಂಡಿತ್ತು. ಬಾಗಿಲ ಸರಳಿನ ಸಂದಿನಿಂದ ಹಾರಿ ಬರುತ್ತಿತ್ತೋ ಏನೋ ರಾತ್ರಿಯೆಲ್ಲಾ ಅದರ ಗೂಡಿನಿಂದ ಚಿಲಿಪಿಲಿ ಸದ್ದು. "ಬೆಳಗಾದೊಡನೆಯೇ ಸ್ವತಂತ್ರವಾಗಿ ಗಾಳಿಯಲ್ಲಿ ಹಾರಾಡಲು ಹೋಗುತ್ತವೆ. ಅದರೆ ನಾವು!"—ಯೋಚಿಸುತ್ತಿದ್ದಂತೆ ಆನಂದನ ಎದೆ ಕಿವಿಚಿದಂತಾಯಿತು.

ಮೂಲೆಯಲ್ಲೊಂದು ಹರಕು ಕಂಬಳಿ, ತುಂಡು ಚಾಪೆ! ಅದೇ ಕೈದಿಗಳ ಹೊದಿಕೆ, ಹಾಸಿಗೆ. ಅದನ್ನು ತಂದು ಎಷ್ಟು ವರ್ಷಗಳಾಗಿತ್ತೋ—ಎಷ್ಟು ಪುರಾತನವಾಗಿತ್ತೋ!—ಇದುವರೆಗೂ ಅದನ್ನು ಎಷ್ಟು ಜನ ಉಪಯೋಗಿಸಿದ್ದರೋ-ಹೊಸದಾಗಿ ಬಂದಾಗ ಕೈದಿಗಳಿಗೆ ಅದನ್ನು ಕೊಡದೆ ಪೋಲೀಸಿನವರು ತಾವೇ ಅದನ್ನು ಉಪಯೋಗಿಸುತ್ತಿದ್ದರು. ಆ ಮೇಲೆ ಕೈದಿಗಳು-ಕಳ್ಳರು, ದರೋಡೆಖೋರರು, ಕೊಲೆಪಾತಕರು, ವ್ಯಭಿಚಾರಿಗಳು:—ಎಂತೆಂತಹ ದುರಾಚಾರಿಗಳೋ ಅದನ್ನು ಉಪಯೋಗಿಸಿದ್ದರು. ಈಗಂತೂ ಅದು ಚಿಂದಿಚಿಂದಿಯಾಗಿತ್ತು ಅದನ್ನು ಇಂದು ತಾನುಪಯೋಗಿಸಬೇಕು! ಆನಂದನಿಗೆ ಏನು ಮಾಡಿದರೂ ಮನಸ್ಸೊಪ್ಪಲಿಲ್ಲ. ಈ ಭೀಕರ ವಾತಾವರಣದಲ್ಲಿ ನಿದ್ರೆ ಬರುವುದಾದರೂ ಹೇಗೆ? ಹಾಗೆಯೇ ಕುಳಿತು ತೂಕಡಿಸುತ್ತಿದ್ದ. ಮಧ್ಯೆಮಧ್ಯೆ ಟೆಲಿಫೋನಿನ ಗಂಟೆ ಹೊಡೆದುಕೊಳ್ಳುತ್ತಿತ್ತು. ಆಗ ಪೋಲೀಸಿನವನೊಬ್ಬ ಎದ್ದು ತನ್ನ ಮತ್ತು ಟೆಲಿಫೋನಿನ ವಂಶಪರಂಪರೆಯ ಗುಣಗಾನ ನಡೆಸಿ ಗಡಸು ದನಿಯಲ್ಲಿ ಟೆಲಿಫೋನಿನೊಳಕ್ಕೆ ಕೂಗಿಕೊಳ್ಳುತ್ತಿದ್ದ. ಮತ್ತೆ ಗೊಣಗಾಟ, ನಿದ್ರೆ—ಕನವರಿಕೆ. ಆನಂದನಿಗೆ ರಾತ್ರಿಯೆಲ್ಲಾ ನಿದ್ರೆ ಬರಲೇ ಇಲ್ಲ. ಆದರೆ ಹೊರಗೆ ಮಾತ್ರ ಗಾಳಿ ತನ್ನಂತೆ ತಾನು ಬೀಸುತ್ತಿತ್ತು. ಊರಿನಲ್ಲಿ ಜನ, ಮರಗಳಲ್ಲಿ ಹಕ್ಕಿಗಳು ಬೆಚ್ಚಗೆ ನಿದ್ರಿಸುತ್ತಿದ್ದವು. ಚಂದ್ರ ಮೋಡಗಳೊಡನೆ ಚೂಟಾಟವಾಡುತ್ತಾ ದಿಗಂತದ ಕಡೆಗೆ ಓಡುತ್ತಿದ್ದ.

ಬೆಳಗಿನ ಜಾವದಲ್ಲಿ ತಣ್ಣನೆಯ ಗಾಳಿ ಕಬ್ಬಿಣದ ಬಾಗಿಲಿನ ಮೂಲಕ ಬೀಸಿದಾಗ ಆನಂದನಿಗೆ ಕೊಂಚ ಜೋಂಪು ಹಿಡಿಯಿತು—ಕೂತಲ್ಲಿಯೇ ಹಾಗೆಯೇ ತೂಕಡಿಸಿದ.—ಏನೋ ಕನಸು—ಏಳುವಾಗಲೇ "ಲಲಿತ—

ಲಲಿತ" ಎಂದುಕೊಂಡು ಎದ್ದ. ಕಣ್ಣು ತೆರೆದು ನೋಡಿದರೆ ತಾನಿದ್ದುದು ಬರಿಯ ಮನೆಯಲ್ಲ ಸೆರೆಯಮನೆ! ತನ್ನ ಮನೋದೌರ್ಬಲ್ಯ ಕಂಡು ಅವನಿಗೇ ನಾಚಿಕೆಯಾಯಿತು. ಕಾವಲಿನ ಪೋಲೀಸಿನವನನ್ನು ಕರೆಸಿ ಬಾಗಿಲು ತೆಗೆಸಿಕೊಂಡು ಹೊರಗೆ ಬಂದ. ಸ್ಟೇಶನ್ನಿನ ಮುಂದಿದ್ದ ನಲ್ಲಿಯ ಬಳಿಹೋಗಿ ಮುಖ ತೊಳೆದುಕೊಂಡು ಬಂದು ಹೊರಗಿನ ಪಡಸಾಲೆಯಲ್ಲಿಯೇ ಕುಳಿತ. ಅಷ್ಟು ಹೊತ್ತಿಗೆ ಸರಿಯಾಗಿ ಮನೆಯಿಂದ ಪಾರ್ವತಮ್ಮನವರೂ ಲಲಿತಳೂ ಬಂದರು. ಲಲಿತ ಬೆಳಗಿನ ಜಾವವೇ ಎದ್ದು ಅವನಿಗಾಗಿ ತಿಂಡಿ ಮಾಡಿಕೊಂಡು ಬಂದಿದ್ದಳು ಜತೆಗೆ ಎರಡು ಲೋಟದಷ್ಟು ಬಿಸಿಯ ಕಾಫಿ. ಆನಂದನ ಬಾಯಿಗೆ ಆ ದಿನದ ಕಾಫಿಯಷ್ಟು ಮತ್ತೆಂದೂ ರುಚಿಯಾಗಿರಲಿಲ್ಲ. ಲಲಿತ ಆನಂದನೊಂದಿಗೆ ಸುಮ್ಮನೇ ಮಾತನಾಡುತ್ತಲೇ ಇದ್ದಳು. ಪಾರ್ವತಮ್ಮನವರು ಮಾತ್ರ ಮೌನವಾಗಿ ಕುಳಿತು ಕಣ್ಣೀರು ಸುರಿಸುತ್ತಿದ್ದರು. ಅದೇ ಸಮಯವೆಂದುಕೊಂಡು ಪೋಲೀಸ್ ಸಬ್ ಇನಸ್ಪೆಕ್ಟರ "ನೋಡೀಮ್ಮ, ಕ್ಷಮಾಪಣೆ ಕೇಳಿಕೊಂಡರೆ ಜೈಲಿಗೆ ಹೋಗಬೇಕಾಗಿಲ್ಲ" ಎಂದ. ಆದರೆ ಆನಂದ ಅವನ ಮಾತಿಗೆ ಲಕ್ಷ್ಯವನ್ನೇ ಕೊಡಲಿಲ್ಲ. ಲಲಿತಳಿಗೆ ತಮ್ಮನನ್ನು ಬಿಟ್ಟು ಹೋಗಬೇಕಲ್ಲಾ ಎಂಬ ದುಃಖ—ಆ ಬೇಗೆಯನ್ನು ಮುಳುಗಿಸಲೆಂದು ಸುಮ್ಮನೆ ಮಾತಾಡುತ್ತಿದ್ದಳು. ಆ ಮಾತಿನಲ್ಲಿ ಅರ್ಥವಿರಲೂ ಇಲ್ಲ. ಅರ್ಥ ವಿರಬೇಕಾದ ಅವಶ್ಯಕತೆಯೂ ಇರಲಿಲ್ಲ!

ಸೆರೆಮನೆಗೆ ಕರದೊಯ್ಯಲು ಪೋಲೀಸ್ ಮೋಟಾರು ಬಂದಿತು ಆನಂದ ತನ್ನ ಬಟ್ಟೆಯ ಗಂಟನ್ನು ಗಾಡಿಗೆ ಹಾಕಹತ್ತಿದ. ಲಲಿತ ಕೈಗೂಸು ನಾಗವಲ್ಲಿಯನ್ನೆತ್ತಿಕೊಂಡು ಮೋಟಾರಿನ ಹತ್ತಿರ ನಿಂತಿದ್ದಳು. ಮೋಟಾರು ಕಂಡುದೇ ತಡ ನಾಗು ಅಳಲಾರಂಭಿಸಿದಳು. ಮಾವನ ಜತೆಯಲ್ಲಿ ತಾನೂ ಮೋಟಾರಿನಲ್ಲಿ ಹೋಗಬೇಕೆಂದು ಅವಳ ಹಟ. ಆನಂದ ವಿಷಾದದ ನಗೆ ಯೊಂದಿಗೆ ಮೆಲ್ಲನೆ ಅವಳನ್ನೆತ್ತಿಕೊಂಡ. ನಾಗವಲ್ಲಿ ಸಂತೋಷದಿಂದ ಕುಣಿದು ಆನಂದನಿಗೊಂದು ಮುತ್ತು ಕೊಟ್ಟಳು. ಸುಮ್ಮನಿರದೆ ತನ್ನ ಜತೆಯಲ್ಲಿ ಒನ್ನಿರೆಂದು ತಾಯಿಯನ್ನೂ ಅಜ್ಜಿಯನ್ನೂ ಕೂಗತೊಡಗಿದಳು. ಆನಂದ ಮತ್ತೆ ಅವಳ ಮೃದು ಕೆನ್ನೆಗೊಂದು ಮುತ್ತಿಟ್ಟ—ಹೂವಿನಂತಹ ಹಾಲುಗೆನ್ನೆ!

"ಗಾಡಿ ಹೊರಡುತ್ತದೆ ಮಿಸ್ಟರ್ ಆನಂದ!" ಎಂದ ಸಬ್ ಇನಸ್ಪೆಕ್ಟರ್.

ಸರಿಯೆನ್ನುತ್ತಾ ಆನಂದ ಕಿಟಕಿಯಿಂದ ಹೊರಗಡೆ ಬಗ್ಗಿ ಲಲಿತಳ ಕೈಗೆ ಮ.ಗುವನ್ನು ಕೊಟ್ಟ. ಕೂಸನ್ನೆತ್ತಿಕೊಂಡಾಗ ಲಲಿತಳ ಕೈಮೇಲೆ ಆನಂದನ ಕಣ್ಣಿನಿಂದೊಂದು ಹನಿ ನೀರು ಬಿತ್ತು. ಲಲಿತಳ ಕಣ್ಣಿನಿಂದಲೂ ಒಂದು ಹನಿ ಉರುಳಿ ಅದರಲ್ಲಿ ಕೂಡಿಕೊಂಡಿತು. ಪಾರ್ವತಮ್ಮನವರು ಮಾತ್ರ ಮಾತನ್ನೇ ಆಡದೆ ಹುಚ್ಚರಂತೆ ಎಲ್ಲಿಯೋ ಶೂನ್ಯದಲ್ಲಿ ದೃಷ್ಟಿಯನ್ನಿಟ್ಟಿದ್ದರು.

" ಹೋಗಿಬರುತ್ತೇನಮ್ಮ" ಎಂದ ಆನಂದ.

ಆಗಲೇ ಪಾರ್ವತಮ್ಮನವರಿಗೆ ಮೈತಿಳಿವು—ಎಚ್ಚರ. ಕಣ್ಣೀರು ಕಟ್ಟೆ ಕಿತ್ತು ಬಂತು. ಲಲಿತಳಿಗೂ ಹೋಗಿಬರುವೆನೆಂದು ತಿಳಿಸಿ ಆನಂದ ಗಾಡಿಯಲ್ಲಿ ಸರಿಯಾಗಿ ಕುಳಿತ ಗಾಡಿ ಹೊರಟಿತು. ಗಾಡಿ ಕಣ್ಣಿಗೆ ಬೀಳುವ ವರೆಗೂ ಲಲಿತಳೂ ಪಾರ್ವತಮ್ಮನವರೂ ಆ ಕಡೆಯೇ ದಿಟ್ಟಿಸುತ್ತಿದ್ದರು. ನಾಗವಲ್ಲಿ ಮೋಟರು ಹೊರಟುಹೋಯಿತಲ್ಲಾ ಎಂದು ಒಂದೇ ಸಮನಾಗಿ ಅಳುತ್ತಿದ್ದಳು. ಗಾಳಿ ಗಿಡದೆಲೆಗಳ ನಡುವೆ ಸರಪರ ಶಬ್ದದಿಂದ ತೂರಿಹೋಗುತ್ತಿತ್ತು.

ಆನಂದನಿಗೆ ಇತ್ತೀಚೆಗೆ ಲಲಿತಳ ಮತ್ತು ಪಾರ್ವತಮ್ಮನವರ ಅಕ್ಕರೆಯು ಅರಿವಾದುದು. ಈ ದಿನವಂತೂ ಅವರನ್ನು ಬಿಟ್ಟು ಬರಬೇಕಾದಾಗ ಅವನಿಗೆ ನೋವು ಮನಮುಟ್ಟಿತು. ಪ್ರೇಮದ ನಿಜವಾದ ಅಳತೆಗೋಲು ಅಗಲಿಕೆ—ಇಂದಿನ ಅಗಲಿಕೆಯಲ್ಲಿಯೇ ನಾಳೆಯ ಪುನರ್ಮಿಲನವಿದೆಯೆಂಬ ಆಸೆ! ಆನಂದನಿಗೂ ಹಾಗೆಯೇ ಅನ್ನಿಸಿತ್ತು ಆದರೆ ಇಂದು ಮೊತ್ತ ಮೊದಲ ಬಾರಿಗೆ ಅನುಭವಕ್ಕೆ ಬಂದ ಪ್ರೇಮದ ಅಗಲಿಕೆಯ ನೋವು ಅವನನ್ನು ಸಂಪೂರ್ಣವಾಗಿ ಅಚೇತನಗೊಳಿಸಿತು. ಇದು ವರೆಗೂ ತಾನು ಅಪಾರ್ಥ ಮಾಡಿಕೊಂಡು ತಾತ್ಸಾರದಿಂದ ಕಾಣುತ್ತಿದ್ದವರು ತನ್ನಲ್ಲಿಟ್ಟಿರುವ ಅಪಾರ ಅಕ್ಕರೆ, ಮಮತೆ, ವಿಶ್ವಾಸಗಳು ಮನಸ್ಸಿಗೆ ತಾಗಿ ಮತ್ತೆ ಅವನನ್ನು ಚಿಂತೆಗೆ ದೂಡಿದವು. ದುಗುಡದ ನೆರಳು ಮುಖದ ಮೇಲೆ ಮೂಡಿತು. ಆ ನೋವಿನಲ್ಲಿ ಆನಂದನಿಗೆ ಮತ್ತಾವುದೂ ಕಾಣಲಿಲ್ಲ. ದಾರಿಯಲ್ಲಿ ಮೋಟಾರು ಸಾಗಿದಂತೆ ಅವನ ಗೆಳೆಯರೆಷ್ಟೋ ಮಂದಿ ಅವನನ್ನು ಗುರುತಿಸಿ ಜಯಜಯ ಕಾರ ಮಾಡಿದರು. ಆದರೆ ಚಿಂತೆಯಲ್ಲಿ ಮುಳುಗಿ ಹೋಗಿದ್ದ ಆನಂದನಿಗೆ ಅದೊಂದೂ ಕೇಳಲೇ ಇಲ್ಲ!

೯

ಎರಡು ಮೂರು ದಿನ ಆನಂದನ ಮನಸ್ಸು ಸುಮ್ಮನೆ ಸರಿದಾಡು ತ್ತಿತ್ತು. ಹುಡುಗರೆಲ್ಲರೂ ಅವನಿಗೆ ಬಹಳ ಗೌರವ ತೋರುತ್ತಿದ್ದರು. ಅವನನ್ನು ಕಂಡರೆ ವಿಶ್ವಾಸವಾಗಿದ್ದರು. ಅವರ ಈ ಉತ್ಸಾಹ, ವಿಶ್ವಾಸ ಗಳಿಂದ ಒಂದೆರಡು ನಿಮಿಷ ಆನಂದನ ಹೃದಯದ ಮೇಲೆ ಉಲ್ಲಾಸದ ತೆರೆ ಬೀಳುತ್ತಿತ್ತು. ಆದರೆ ಮರುಕ್ಷಣವೇ ಹೃದಯ ಭಾರವಾಗುತ್ತಿತ್ತು. ಯಾವುದನ್ನೋ ಕಳೆದುಕೊಂಡಂತೆ ಹೃದಯ ಎಲ್ಲೆಲ್ಲಿಯೋ ಹಾರಿಹೋಗು ತ್ತಿತ್ತು. ಎಲ್ಲವೂ ಶೂನ್ಯವಾದಂತೆ, ತೆರವಾದಂತೆ ತೋರಿತು. ಹೊಸ ಜೀವನಕ್ಕೆ ಹೊಂದಿಕೊಳ್ಳುವುದೇ ಅಸಾಧ್ಯವೆನಿಸಿತು. ಮನಸ್ಸು ಎಷ್ಟೇ ಯತ್ನಿಸಿದರೂ ಸ್ಥಿರವಾಗುತ್ತಿರಲಿಲ್ಲ. ಯಾವುದೋ ಅವ್ಯಕ್ತ ಚಿಂತೆಯನ್ನು ಹುಡುಕಿಕೊಂಡು ಅಲೆದಾಡುತ್ತಿತ್ತು—ತಾಯಿಯ ಚಿಂತೆ, ಅಕ್ಕನ ಚಿಂತೆ, ರಾಮುವಿನ ಯೋಚನೆ ಜತೆಗೆ ಮತ್ತಿನ್ನಾವುದೋ ಕಾಣಲಾರದ ಚಿಂತೆ— ಅವರೆಲ್ಲ ಹೇಗಿರುವರೋ? ಏನು ಮಾಡುತ್ತಿರುವರೋ—ಬಹಳ ಕೊರಗು ತ್ತಿರುವರೋ ಏನೋ ಎಂದುಕೊಳ್ಳುತ್ತಿದ್ದ. ಅಮ್ಮನೂ ಲಲಿತಕ್ಕನೂ ಬಹಳ ನೊಂದುಕೊಳ್ಳುತ್ತಿರಬಹುದು—ಅವರಿಗೆ ಸಮಾಧಾನ ನೀಡುವವರಾರೂ ಇಲ್ಲ. ಭಾವನಂತೂ ಮಹಾರುದ್ರ!—ನಾನಾದರೂ ಹೋಗಿ ಸಮಾಧಾನಗೊಳಿಸಿ ಬರುತ್ತೇನೆಂದು ಧಿಗ್ಗನೆದ್ದು ನಿಲ್ಲುತ್ತಿದ್ದ. ಆದರೆ ಮರುಕ್ಷಣವೇ ತಾನಿರುವುದು ಸೆರೆಮನೆಯಲ್ಲಿ ಎಂದು ನೆನಪಾಗುತ್ತಿತ್ತು. ಹೃದಯ ಮತ್ತೂ ಭಾರವಾಗಿ ನಿಟ್ಟುಸಿರೊಂದನ್ನಿಟ್ಟು ಮತ್ತೆ ಯೋಚನೆಯ ಮಡಿಗೆ ಕುಸಿಯುತ್ತಿದ್ದ!

ಲಲಿತ ಈಗೇನು ಮಾಡುತ್ತಿರಬಹುದು? ಊಟ ಮಾಡುತ್ತಿರ ಬಹುದೇ? ನನ್ನನ್ನು ನೆನೆದು ಕಣ್ಣೀರು ಕರೆಯುತ್ತಿರಬಹುದು ತಟ್ಟೆಯ ಅನ್ನಕ್ಕೆ ನೀರು ತೊಟ್ಟುತೊಟ್ಟಾಗಿ ಹನಿದು ಅನ್ನ ಉಪ್ಪಾಗಬಹುದು! ನಾನೂ ಅವಳೂ ಒಂದೇ ಜತೆಗೆ ಕುಳಿತು ಊಟ ಮಾಡುತ್ತಿದ್ದುದು ನೆನಪಾಗುತ್ತಿರಬಹುದು! ಆಗ—ಚಿಕ್ಕವರು—ಎಷ್ಟು ಚೆನ್ನಾಗಿತ್ತು. ಬೆಳ ದಿಂಗಳ ರಾತ್ರಿಯಲ್ಲಿ ಇಬ್ಬರೂ ತಟ್ಟೆಯಲ್ಲಿ ಅನ್ನ ಹಾಕಿಕೊಂಡು ಕಾಲುವೆಯ ಬಳಿಗೆ ಓಡಿಹೋಗಿ ಅಲ್ಲಿ ಒಬ್ಬರಿಗೊಬ್ಬರು ಕೀಟಲೆ ಮಾಡುತ್ತಾ ತಿನ್ನುತ್ತಿದ್ದೆವು.

ಎಂಜಲು ಎಂಬ ಮಾತೇ ಇಲ್ಲ. ಅದೆಲ್ಲಾ ಮರೆತು ಹೋಗುತ್ತಿತ್ತು—ಲಲಿತ ಳಿಗೆ ಮದುವೆಯಾದ ಮೇಲೆ ಕೂಡ ಇಬ್ಬರೂ ಎಷ್ಟೋ ದಿನ ಒಟ್ಟಿಗೇ ಕುಳಿತು ಊಟ ಮಾಡಿದ್ದೆವು. ಈಗ ಆ ದಿನಗಳನ್ನೆಲ್ಲಾ ನೆನೆದು ಲಲಿತ ಅಳುತ್ತಿರ ಬಹುದು. ಅಥವಾ ನಾನು ಅವಳನ್ನು ಬೈದುದನ್ನೆಲ್ಲಾ ನೆನೆದುಕೊಂಡು—ಛೆ! ಛೆ! ಲಲಿತ ಅಂತಹವಳಲ್ಲ. ಎಷ್ಟು ಮೃದುಹೃದಯದವಳು. ಹಾಗೆಲ್ಲಾ ಕೆಟ್ಟುದನ್ನು ಜ್ಞಾಪಿಸಿಕೊಳ್ಳುವವಳೇ ಅಲ್ಲ. ನನ್ನ ಮಾತನ್ನು ಹಾಗೆಲ್ಲಾ ವಿಪರೀತವಾಗಿ ತೆಗೆದುಕೊಂಡಿದ್ದರೆ ಇಷ್ಟು ದಿನವು ನನ್ನನ್ನು ಹೀಗೆ ಇರ ಗೊಡಿಸುತ್ತಲೇ ಇರಲಿಲ್ಲ. ನನಗಾಗಿ ಗಂಡನ ಬೈಗುಳಗಳನ್ನೆಲ್ಲಾ ಸಹಿಸು ತ್ತಲೇ ಇರಲಿಲ್ಲ. ಪಾಪ! ಪೋಲೀಸ್ ಸ್ಟೇಷನ್ನಿನ ಬಳಿಗೆ ಕೂಡ ಬಂದಿದ್ದ ಳಲ್ಲವೇ? ಈಗ ನಾನೇನು ಮಾಡುತ್ತಿರುವೆನೆಂದು ಯೋಚಿಸುತ್ತಾ ಇರ ಬಹುದು. ಮೋಟಾರು ಕಂಡಾಗಲೆಲ್ಲಾ ನಾನು ಜೈಲಿಗೆ ಬಂದ ಮೋಟಾರು ನೆನಪಾಗಿ ಅಳಬಹುದು. ಪಾಪ! ನನ್ನಿಂದ ಅವಳಿಗೆಷ್ಟು ತೊಂದರೆ!"

ಹೀಗೆಯೇ ಒಂದೇ ಸಮನಾಗಿ ಯೋಚನೆ–ಯೋಚನೆ! ಇದರೊಂದಿಗೇ ಯಾವುದೋ ಅವ್ಯಕ್ತ ಮತ್ತು ಅಪರಿಚಿತ ವ್ಯಕ್ತಿಯ ಅಸ್ಪಷ್ಟ ಮೂರ್ತಿ ಮಸಕುಮಸಕಾಗಿ ಮನಸ್ಸಿನಲ್ಲಿ—ಹಿನ್ನೆಲೆಯಲ್ಲಿ ಮೂಡಿ ಮುಂದೆ ಮುಂದೆ ಸರಿದುಬರುತ್ತಿತ್ತು. ಯಾವುದೋ ಮಧುರ ಗಾನದ ಜತೆಗೆ ಆ ಮೂರ್ತಿಯ ನೆರಳು ಕೂಡಿಕೊಂಡು ಹೃದಯವನ್ನು ಕಲಕಿ ಮನಸ್ಸನ್ನು ಕಾಡುತ್ತಿತ್ತು. ಅದನ್ನು ಹೀಗೇ ಎಂದು ಹೇಳಲೂ ಬರುತ್ತಿರಲಿಲ್ಲ; ಅದರಿಂದ ತಪ್ಪಿಸಿ ಕೊಳ್ಳಲೂ ಆಗುತ್ತಿರಲಿಲ್ಲ.

ಇದೆಲ್ಲಾ ಯೋಚನೆಯಲ್ಲಿ ಆನಂದನಿಗೆ ಯಾವುದೂ ಬೇಕಾಗಲಿಲ್ಲ ಯಾವಾಗಲೂ ಸಪ್ಪೆಮೋರೆ ಹಾಕಿಕೊಂಡೇ ಇರುತ್ತಿದ್ದ. ನಕ್ಕರೂ ವಿಷಾದದ ನಗೆ. ಹಲವಾರು ದಿನಗಳು ಹೀಗೆಯೇ ಕಳೆಯಿತು. ಸೆರೆಮನೆಯ ಸ್ನೇಹಿತ ರೆಲ್ಲಾ ಆನಂದನಿಗೆ "ಮನೆಯ ಗೀಳು" ಎಂದು ಹಾಸ್ಯ ಮಾಡಲಾರಂಭಿ ಸಿದ್ದರು.

ಕೆಲವೇ ದಿನಗಳಲ್ಲಿ ಆನಂದ ಚೇತರಿಸಿಕೊಂಡ. ಅವನಿಗೆ ಮುಖ್ಯವಾಗಿ ಬೇಕಾಗಿದ್ದುದು ವಿಶ್ರಾಂತಿ. ಹಗಲು ರಾತ್ರಿ ದುಡಿತದಿಂದ ಮೈಗೆ ವಿಪರೀತ ಅಪಥ್ಯವಾಗಿ ಬಹಳ ಇಳಿದು ಹೋಗಿದ್ದ. ಬಿಸಿಲಿನಲ್ಲಿ ಸುತ್ತಿ ಸುತ್ತಿ ಮೈ

ಇದ್ದಲಾಗಿತ್ತು. ಈಗ ಸೆರೆಮನೆಯಲ್ಲಿ ಯಾವ ಕೆಲಸವೂ ಇರಲಿಲ್ಲ. ಸಂಪೂರ್ಣ ವಿಶ್ರಾಂತಿ ಸಿಗುತ್ತಿತ್ತು. ಇದರಿಂದ ಆರೋಗ್ಯದ ಕಡೆಗೆ ಹೆಚ್ಚು ಗಮನ ಕೊಡಲು ಸಾಧ್ಯವಿತ್ತು. ದಿನ ಕಳೆದಂತೆ ಆನಂದ ಜೈಲಿನ ಜೀವನಕ್ಕೆ ಹೊಂದಿ ಕೊಂಡ. ಮೈ ಸುಧಾರಿಸುತ್ತಾ ಬಂತು.

ಜೈಲಿನ ದಿನದಿನದ ಕಾರ್ಯಕ್ರಮವೆಂದರೆ ಪ್ರಾತಃಕಾಲ ಎಂಟು ಗಂಟೆಯ ವೇಳೆಗೆ ಸಾಮೂಹಿಕ ಪ್ರಾರ್ಥನೆ. ಈ ಸಭೆಯಲ್ಲಿ ಕೊರಾನ್, ಭಗವದ್ಗೀತೆ ಮತ್ತು ಬೈಬಲ್ಲುಗಳಿಂದ ಶ್ಲೋಕಗಳನ್ನು ಓದುತ್ತಿದ್ದರು. ಆದಾದನಂತರ ಗಾಂಧೀಜಿಯ ಶ್ರೇಯಃಪ್ರಾರ್ಥನೆ. ಪ್ರಾರ್ಥನೆಯಾದ ಮೇಲೆ ಎಲ್ಲರೂ ತಿಂಡಿ ತಿನ್ನಲು ಹೋಗುತ್ತಿದ್ದರು. ತಿಂಡಿಯಮನೆ— ಮನೆಯೆನ್ನು ವುದಕ್ಕಿಂತ ತೊಟ್ಟಿಯೆಂದರೇ ವಾಸಿ—ತಿಂಡಿಯ ತೊಟ್ಟಿಯಲ್ಲಿ ಎಲ್ಲರೂ ಸಾಲಾಗಿ ಕುಳಿತು ತಟ್ಟೆ ಮುಂದಿಟ್ಟುಕೊಂಡರೆ ಒಬ್ಬರೋ ಇಬ್ಬರೋ ಬಡಿಸು ತ್ತಿದ್ದರು. ಎಲ್ಲರೂ ತಿಂಡಿತಿಂದು ಮುಗಿಸುವ ವೇಳೆಗೆ ಒಂಬತ್ತು ಗಂಟೆ ಯಾಗುತ್ತಿತ್ತು. ಅನಂತರ ಎಲ್ಲರೂ ತಮ್ಮ ತಮ್ಮ ಬ್ಯಾರಕ್ಕು (Barrack) ಗಳಿಗೆ ಹೋಗುತ್ತಿದ್ದರು. ಹನ್ನೆರಡು ಗಂಟೆಯಾಗುವವರೆಗೂ ಅವರಿಗೆ ಪೂರ್ಣ ವಿಶ್ರಾಂತಿ. ತಮಗೆ ಬೇಕಾದ ಕೆಲಸ ಮಾಡಿಕೊಳ್ಳಬಹುದು. ಸಾಮಾನ್ಯವಾಗಿ ಸ್ನಾನ, ಬಟ್ಟೆ ಒಗೆಯುವುದೆಲ್ಲಾ ಈ ಅಂತರದಲ್ಲೇ. ಹನ್ನೆ ರಡುಗಂಟೆಗೆ ಎಲ್ಲರೂ ಊಟಕ್ಕೆ ಹೊರಡುತ್ತಿದ್ದರು. ಊಟ ಮುಗಿಸಿ ಒಂದು ಗಂಟೆಯಿಂದ ಐದು ಗಂಟೆಯವರೆಗೂ ಮತ್ತೆ ವಿಶ್ರಾಂತಿ. ಹಲವರು ಹರಟೆ ಕೊಚ್ಚುತ್ತಿದ್ದರು. ಹಲವರು ಇಸ್ಪೀಟಾಡುತ್ತಿದ್ದರು. ಮತ್ತೆ ಕೆಲವರು ಸುಖ ವಾಗಿ ನಿದ್ರೆ ಹೋಗುತ್ತಿದ್ದರು. ಒಬ್ಬಿಬ್ಬರು ಕುಳಿತು ಏನನ್ನಾದರೂ ಓದು ತ್ತಿದ್ದರು. ಐದು ಗಂಟೆಗೆ ಮಧ್ಯಾಹ್ನದ ಚಹಾ. ಏಳು ಗಂಟೆಗೆ ಪ್ರಾರ್ಥನೆ- ಸಭೆ. ರಾತ್ರಿ ಒಂಬತ್ತು ಗಂಟೆಗೆ ಊಟ, ಆ ಮೇಲೆ ವಿಶ್ರಾಂತಿ.

ಆನಂದ ಬೆಳಗ್ಗೆ ಬೇಗನೇ ಎದ್ದು ತನ್ನ ಸ್ನಾನ ಮುಗಿಸಿ ಪ್ರಾರ್ಥನೆಗೆ ಹೋಗುತ್ತಿದ್ದ. ಮೊದಲು ಮೊದಲು ತಣ್ಣೀರಿನ ಸ್ನಾನ ಮೈಗೆ ಒಗ್ಗದಿದ್ದರೂ ಕೆಲವು ದಿನಗಳಲ್ಲೇ ಅಭ್ಯಾಸವಾಗಿ ಹೋಯಿತು. ತಿಂಡಿತಿಂದು ಮುಗಿ ದೊಡನೆಯೇ ಬಟ್ಟೆಗಳನ್ನೆಲ್ಲಾ ಒಗೆದು ಒಣಹಾಕಿ ಬಿಡುತ್ತಿದ್ದ. ಹನ್ನೆರಡು ಗಂಟೆಯ ವರೆಗೂ ಬಿಡುವಿರುತ್ತಿತ್ತು. ಆ ಕಾಲವನ್ನೆಲ್ಲಾ ಆನಂದ ತನ್ನ

ಕೋಣೆಯು ಇನ್ನೊಬ್ಬ ಗೆಳೆಯನೊಂದಿಗೆ ಓದುವುದರಲ್ಲಿ ಕಳೆಯುತ್ತಿದ್ದ ಜೈಲಿನ ಉತ್ತರಭಾಗಕ್ಕೆ ಒಂದು ದೊಡ್ಡ ತರಕಾರಿಯ ತೋಟವಿತ್ತು. ಅಲ್ಲಿಯೇ ಹಲವಾರು ದೊಡ್ಡ ತೆಂಗಿನ ಮರಗಳು, ಮಾವಿನ ಮರಗಳು. ಆನಂದನೂ ಅವನ ಸ್ನೇಹಿತನೂ ಆ ತೋಟಕ್ಕೆ ಹೋಗಿ ಯಾವುದಾದರೂ ಮಾವಿನ ಮರದಡಿಯಲ್ಲಿ ಕುಳಿತುಕೊಳ್ಳುತ್ತಿದ್ದರು. ಊಟದ ಗಂಟೆಯಾಗುವ ವರೆಗೂ ಯಾವುದಾದರೂ ಪುಸ್ತಕವನ್ನೋದಿ ಚರ್ಚೆ ಮಾಡುತ್ತಿದ್ದರು. ಆ ಮೇಲೆ ಊಟ. ಊಟವಾದ ಮೇಲೆ ಕೊಂಚ ಹೊತ್ತು ವಿಶ್ರಾಂತಿ ತೆಗೆದು ಕೊಂಡು ಮತ್ತೆ ಸಾಹಿತ್ಯದ ವಿಚಾರದ ಚರ್ಚೆ. ಸಂಜೆ ಎಲ್ಲರೊಂದಿಗೆ ಆಟ ವಾಡುತ್ತಿದ್ದ. ಪ್ರತಿ ಭಾನುವಾರವೂ ಸಂಜೆ ಜೈಲಿನಲ್ಲೇ ವಿದ್ಯಾರ್ಥಿಗಳ ಚರ್ಚಾಕೂಟವನ್ನೇರ್ಪಡಿಸಿಕೊಂಡಿದ್ದರು. ಅಲ್ಲಿ ಆನಂದನೂ ಆಗಾಗ ಮಾತ ನಾಡುತ್ತಿದ್ದ; ಇಲ್ಲವೇ ತನ್ನ ಹೊಸ ಗೀತಗಳನ್ನು ಹಾಡುತ್ತಿದ್ದ. ಹಲವಾರು ದಿನ ಕಳೆಯುವುದರಲ್ಲಿ ಆನಂದನಿಗೆ ಮನೆಯ ಗೀಳು ಕರಗಿಹೋಯಿತು. ಜೈಲಿನ ಜೀವನಕ್ಕೆ ಜೀವ ಹೊಂದಿಕೊಂಡಿತು. ಇದುವರೆಗೂ ಇದ್ದ ಕೊರತೆ ತುಂಬಿಬಂದಂತಾಯಿತು.

ಆನಂದ ಸೆರೆಮನೆಗೆ ಬಂದು ಹದಿನೈದನೆಯ ದಿನ. ಬೆಳಗ್ಗೆ ತಿಂಡಿತಿಂದು ಮುಗಿಸಿ ತೋಟದ ಮಾವಿನಮರದ ನೆರಳಿನಲ್ಲಿ ಕುಳಿತು ಎ. ಇ. ಹೌಸ್ ಮನ್ (A E. Housman) ನ ಗೀತಗಳನ್ನೋದುತ್ತಾ ಕುಳಿತಿದ್ದ. ಬಾಳ್ವೆಯ ದುರಂತದ ಭಟ್ಟಿಯಿಳಿಸಿದ ರಸಪಾಕ ಆ ಗೀತಗಳು. ಅವುಗಳಲ್ಲೇ ಮನಸ್ಸು ಮರೆತಿದ್ದಾಗ ಪೋಲೀಸಿನವನು ಬಂದು "ನಿಮ್ಮನ್ನು ಕಾಣಲು ಯಾರೋ ಬಂದಿದಾರೆ" ಎಂದ.

ಆನಂದನ ಮನಸ್ಸು ಒಮ್ಮೆಗೇ ಅರಳಿತು. ರಕ್ತಪ್ರವಾಹದಷ್ಟು ರಭಸ ದಿಂದ ಮುಖಕ್ಕೆ ಚಿಮ್ಮಿತು. ಪುಸ್ತಕಮುಚ್ಚಿ ಎದ್ದು ಹೊರಟು ಬರುವಷ್ಟ ರಲ್ಲೇ ಆತುರ. ಯಾರು ಬಂದಿರುವರೆಂಬುದನ್ನೇನೂ ಅವನು ಯೋಚಿಸಲೇ ಬೇಕಿರಲಿಲ್ಲ. ಅಕ್ಕನನ್ನು—ಅಮ್ಮನನ್ನು ಕಾಣಲು ಅಷ್ಟೊಂದು ಕಾತರ— ಅಷ್ಟೊಂದು ಅವಸರ!

ಪಾರ್ವತಮ್ಮನವರು ಕೊರಗಿ ಕೊರಗಿ ಅರ್ಧವಾಗಿ ಹೋಗಿದ್ದರು. ಲಲಿತಳೂ ಇಳಿದು ಹೋಗಿದ್ದಳು. ಆನಂದನಿಗೆ ಮನಸ್ಸಿನಲ್ಲಿ ಮರುಕ

ಮೂಡಿತು. ತಾಯಿಯ ಸ್ಥಿತಿ, ಅಕ್ಕನ ವಿಶ್ವಾಸ ಕಂಡು ಕಣ್ಣಲ್ಲಿ ನೀರು ಹನಿಯಿತು. ಅಕ್ಕನ ಕಂಕುಳಲ್ಲಿದ್ದ ನಾಗವಲ್ಲಿ ಅವನ ಕಡೆಗೇ ಟಕಮಕನೆ ನೋಡುತ್ತಿದ್ದಳು. ನೆನಪಿತ್ತೋ ಇಲ್ಲವೋ—

" ನೀನೂ ಬಂದೆಯಾ ನಾಗೂ, ಜೈಲಿಗೆ ನೀನೂ ಬರಬೇಕಾಯಿತೇ ? " ಎಂದ, ಆನಂದ ವಿಷಾದದ ನಗೆಯೊಂದಿಗೆ.

" ಮಾಮ ! " ಎಂದು ನಾಗು ಅವನನ್ನು ಗುರುತಿಸಿ ಕೈನೀಡಿದಳು.

ಆನಂದ ಅವಳನ್ನೆತ್ತಿ ಎದೆಗೆ ತಬ್ಬಿಕೊಂಡ. ಅವಳ ಕಾಡಿಗೆಬಣ್ಣದ ಕೂದಲಮೇಲೆ ಅವನ ಕಣ್ಣಿನಿಂದ ಬಿದ್ದ ಹನಿ ನೀಲಾಕಾಶದಲ್ಲಿನ ನಕ್ಷತ್ರದಂತೆ ಮಿನುಗಿತು.

"ಇಷ್ಟು ದಿನ ಎಲ್ಲಿ ಹೋಗಿದ್ದೆ ಮಾಮ" ಎಂದಳು ನಾಗು ತೊದಲುತ್ತ.

ಅವನ ಶರಟಿನ ಗುಂಡಿಯನ್ನು ಕೀಳಲು ಯತ್ನಿಸುತ್ತಿದ್ದ ಅವಳನ್ನು ಆನಂದ ಮೆಲ್ಲನೆ ಕೆನ್ನೆಗೊತ್ತಿಕೊಂಡು ಮುತ್ತಿಟ್ಟ.

ಇದುವರೆಗೂ ದುಃಖವನ್ನು ತಡೆಗಟ್ಟಿದ್ದ ಪಾರ್ವತಮ್ಮನವರಿಗೆ ಇನ್ನು ಸಾಧ್ಯವಾಗಲಿಲ್ಲ.

" ಬೇಡಬೇಡಾಂದರೂ ಕೇಳಲಿಲ್ಲ" ಎಂದರು ಅಳುವುದಕ್ಕಾರಂಭಿಸಿ.

" ಯಾಕಮ್ಮ-ನಾನೀಗ ಏನಾಗಿದ್ದೇನಮ್ಮ ? ಮೊದಲಿಗಿಂತಲೂ ವಾಸಿಯಲ್ಲವೇನಮ್ಮ ? " ಎಂದ ಆನಂದ ನಗುತ್ತ.

" ಏನು ವಾಸಿಯೋಪ್ಪ— "

" ಯಾಕಮ್ಮ-ನೀನೇ ಹೇಳುತ್ತಿರಲಿಲ್ಲವೇನಮ್ಮ ? ಜೈಲಿನ ಹೊರಗಿದ್ದಾಗ ನನ್ನನ್ನು ನೋಡುವುದಕ್ಕಾಗುತ್ತಿರಲಿಲ್ಲ. ಮೈಮುಖವೆಲ್ಲಾ ಟಾರಿನ ಬಣ್ಣವಾಗಿ ಹೋಗಿತ್ತು. ಗಲ್ಲಗಳೆಲ್ಲಾ ಬತ್ತಿಹೋಗಿದ್ದವು. ಕಣ್ಣು ಗುಳಿಬಿದ್ದಿತ್ತು. ಈಗ ನೋಡು, ಮೈ ತುಂಬಿಕೊಂಡಿಲ್ಲವೇ ? ಮೊದಲಿನ ಬಣ್ಣಕೆ ತಿರುಗಿಲ್ಲವೇ? ಮೊದಲಿಗಿಂತಲೂ ಈಗ ನನ್ನ ಮೈ ಚೆನ್ನಾಗಿದೆ " ಎಂದ ಆನಂದ.

ಇದುವರೆಗೂ ದೂರದಲ್ಲಿ ಸೆಟೆದುಕೊಂಡು ನಿಂತಿದ್ದ ನರಸಿಂಹಯ್ಯನವರು ಬಾಯಿ ಹಾಕಿದರು. ಅವರು ಬಂದುದನ್ನೇ ಆನಂದ ಗಮನಿಸಿರಲಿಲ್ಲ.

" ಚೆನ್ನಾಗಿದೆ; ಮತ್ತೇನು ಕೇಡು ! ಯಾರಪ್ಪನ ಗಂಟೇನು ಹೋಗಬೇಕು ? ಬಿಟ್ಟಿ ಕೂಳು ಹೊಟ್ಟೆ ತುಂಬಾ ಬೀಳುತ್ತೆ. ಹೇಳುವವರಿಲ್ಲ—

ಕೇಳುವವರಿಲ್ಲ. ತಿನ್ನುವುದು ಮಲಗುವುದು. ಬೇರೇನೂ ಮಾಡೋಕೆ ಕೆಲಸ ವಿಲ್ಲ. ಹಂದಿಗಳ ಹಾಗೆ ಕೊಬ್ಬದೇ ಇನ್ನೇನು " ಎಂದರು ನರಸಿಂಹಯ್ಯ.

ಆನಂದ ಭಾವನೊಂದಿಗೆ ಮಾತನ್ನೇ ಆಡಲಿಲ್ಲ. ಅಂತಹವರೊಂದಿಗೆ ಮಾತನಾಡುವುದಕ್ಕಿಂತ ಸುಮ್ಮನಿರುವುದೇ ಲೇಸೆಂದು ಸುಮ್ಮನಿದ್ದ.

"ನಿಮ್ಮ ಗತಿಯೆಲ್ಲಾ ಹೀಗಾಯಿತು. ನೀವೆಲ್ಲಾ ಇಲ್ಲಿ ಜೈಲಿನಲ್ಲಿ ಕೊಳೆಯುತ್ತಿರುವಿರಿ. ಅಲ್ಲಿ ಹೊರಗಡೆ ಶಾಲಾಕಾಲೇಜುಗಳಿಗೆ ಹುಡುಗರು ಹೋಗುತ್ತಿದ್ದಾರೆ. ನೀನೂ—" ಪಾರ್ವತಮ್ಮ ಮತ್ತೆ ಆರಂಭಿಸಿದರು.

"ಅಮ್ಮ, ನನಗೆ ಈ ಹಾದಿ ಸತ್ಯದ ಹಾದಿಯೆಂದು ತೋರುತ್ತಿದೆ. ಆದುದರಿಂದಲೇ ನಾನದನ್ನು ತುಳಿಯುತ್ತಿರುವುದು ಕೂಡ. ಯಾವ ಕಷ್ಟ ಬೇಕಾದರೂ ಬರಲಿ, ಯಾರು ಹೇಗೆ ಬೇಕಾದರೂ ಮಾಡಿಕೊಳ್ಳಲಿ, ಏನು ಬೇಕಾದರೂ ಅನ್ನಲಿ, ನಾನು ಮಾತ್ರ ನನ್ನ ಆತ್ಮವನ್ನು ವಂಚಿಸಲಾರೆ" ಎಂದ ಆನಂದ.

"ಆತ್ಮವಂತೆ ಆತ್ಮ! ಪುಂಡುಪೋಕರಿಗಳಿಗೆ ಆತ್ಮ ಬೇರೆ! ಪೋಲಿ ಪೋಲಿಯಾಗಿ ಜೈಲಿಗೆ ಬಂದು ಆತ್ಮದ ಮಾತು! ಸಿಗಿದು ತೋರಣಕಟ ಬೇಕು." ಎಂದು ಗುಡುಗಿದರು ನರಸಿಂಹಯ್ಯ

ಲಲಿತ ಬಂದಾಗಿನಿಂದ ಒಂದು ಮಾತನ್ನೂ ಆಡಿರಲಿಲ್ಲ. ಗಂಡನ ಭಯಕ್ಕೆ ನಡುಗುತ್ತಿದ್ದಳು. ಕೊನೆಯ ವರೆಗೂ ಯಾವ ಮಾತನ್ನೂ ಆಡದೆ ಮೌನವಾಗಿದ್ದಳು. ಆನಂದನ ಕಡೆಗೊಮ್ಮೆ ಕರುಣಾದೃಷ್ಟಿ ಬೀರಿ ಮತ್ತೆ ತಲೆ ತಗ್ಗಿಸಿದಳು.

ಎಲ್ಲರೂ ಹೊರಟರು. ನರಸಿಂಹಯ್ಯ ಎಲ್ಲರಿಗಿಂತಲೂ ಮುಂದೆ ಹೊರಟುನಿಂತರು. ಲಲಿತ ಮೆಲ್ಲನೆ ಆನಂದನ ಕಡೆ ತಿರುಗಿ ಮೃದುವಾಗಿ "ಹುಷಾರಾಗಿರು ಆನಂದ, ಅಪಥ್ಯ ಮಾಡಿಕೊಳ್ಳಬೇಡ." ಎಂದಳು

ನರಸಿಂಹಯ್ಯ ಅವಳ ಮೇಲೆ ಸಿಡಿಲಿನಂತೆರಗಿಬಿಟ್ಟರು—

"ನೀನೇನೂ ಹೇಳಬೇಕಾಗಿಲ್ಲ ನಡಿ" ಎಂದುದೇ ತಡ, ಲಲಿತಾ ನಡುಗಿಬಿಟ್ಟಳು.

ಎಲ್ಲರೂ ಜೈಲಿನ ಹೆಬ್ಬಾಗಿಲಿನ ಬಳಿ ಹೋದರು. ನರಸಿಂಹಯ್ಯ ಮೊದಲು ಹೊರಗೆ ಹೋದರು. ಪಾರ್ವತಮ್ಮನವರು ಬಿಕ್ಕಿಬಿಕ್ಕಿ ಅಳುತ್ತಾ

ಬಾಗಿಲು ದಾಟಿದರು. ಲಲಿತಾ ಕೊನೆಯಲ್ಲಿ ದಾಟುತ್ತಾ ಬಾಗಿಲಿನ ಸಂದಿನಿಂದ ಆನಂದನ ಕೈಯಲ್ಲೇನೋ ಇಟ್ಟಳು— "ಬೇಕಾಗಬಹುದು, ಇರಲಿ." ಎನ್ನುವ ಮಾತು ಆನಂದನ ಕಿವಿಗೆ ಬಿತ್ತು. ಬಾಗಿಲು ಧಡಧಡ ಸದ್ದು ಮಾಡುತ್ತಾ ಮುಚ್ಚಿಕೊಂಡಿತು.

ಆನಂದ ಕೈಯಲ್ಲಿದ್ದ ಹಣವನ್ನೇ ದಿಟ್ಟಿಸುತ್ತ ಬಹಳಹೊತ್ತು ಹಾಗೆಯೇ ನಿಂತಿದ್ದ. ಗಂಡನೆಂದರೆ ನಡುಗುವ ಲಲಿತ ತನಗಾಗಿ ಗಂಡನಿಗೆ ಕಾಣದಂತೆ ಈ ಹಣ ತಂದುಕೊಟ್ಟಳಲ್ಲಾ—ಎಂತಹ ವಿಶ್ವಾಸ—ಎಂತಹ ಪ್ರೇಮಮೂರ್ತಿಯೆಂದು ತಿಳಿದು ಕಣ್ಣಿನಲ್ಲಿ ಒಂದೇ ಸಮನಾಗಿ ನೀರು ಹರಿಯಿತು. ಆ ಅಳುವಿನಲ್ಲಿ ಸುಖದುಃಖಗಳೊಂದಿಗೆ ಪಶ್ಚಾತ್ತಾಪವೂ ಮನೆ ಮಾಡಿಕೊಂಡಿತ್ತು.

× × × × ×

ಆನಂದ ಸೆರೆಮನೆಗೆ ಬಂದು ಎರಡು ತಿಂಗಳು ಕಳೆಯಿತು. ಮುಷ್ಕರದ ಕಾಲದಲ್ಲಿ ಅಪಾರ ಉತ್ಸಾಹ, ಹುಮ್ಮಸ್ಸು ತೋರಿದ ಹುಡುಗರೆಲ್ಲಾ ಕಾಲೇಜಿಗೆ ಹಿಂತಿರುಗಲಾರಂಭಿಸಿದ್ದರು ಸೆರೆಮನೆಯಲ್ಲಿದ್ದ ಎಷ್ಟೋ ಮಂದಿ ಕ್ಷಮಾಪಣೆ ಕೇಳಿಕೊಂಡು ಹೊರಟುಹೋದರು. ಇನ್ನುಳಿದವರಲ್ಲಿ ಬಹಳ ಮಂದಿ ತಮಗೆಂದು ಬಿಡುಗಡೆಯೋ ಎಂದು ಚಡಪಡಿಸುತ್ತಿದ್ದರು. ಅಧಿಕಾರಿಗಳಿಗೆ ತಮ್ಮ ಮೇಲೆ ಕರುಣೆ ಬಂದು ತಮ್ಮನ್ನು ಬಿಡುಗಡೆ ಮಾಡುವ ಹಾತೊರೆಯುತ್ತಾ ಕುಳಿತಿದ್ದರು. ಆದರೆ ಕೆಲವರು ಮಾತ್ರ—ಕೈಬೆರಳಿನಲ್ಲಿ ಅವರನ್ನು ಎಣಿಸಬಹುದಾಗಿತ್ತು—ತಮ್ಮ ಮೊದಲಿನ ಮಾತುಗಳಿಗೇ ಅಂಟಿಕೊಂಡಿದ್ದರು. ಅವರಿಗೆ ಬಿಡುಗಡೆಯಾಗುವ ಇಚ್ಛೆಯಿರಲಿಲ್ಲ. ಉಳಿದವರು ಏನಾದರೂ ಮಾಡಿಕೊಳ್ಳಲಿ, ಕ್ಷಮೆಬೇಡಿ ಅವರು ಜೈಲಿನಿಂದ ಹೋದರೆ ನಾವೂ ಅವರೊಂದಿಗೆ ಹೋಗಬೇಕಾಗಿಲ್ಲ. ನಮ್ಮ ಹಾದಿ ನಮಗೆ ಸರಿಯೆನ್ನುವ ನಂಬುಗೆ ಅವರಲ್ಲಿಲ್ಲ. ಆದುದರಿಂದ ಹಾಗಾಗಿದೆ. ಆದರೆ ನಮಗೆ ನಂಬುಗೆಯಿದೆ. ಅದು ಉಳಿದಿರುವ ತನಕ ಏನೂ ಚಿಂತೆಯಿಲ್ಲ ಎಂದು ಈ ಕೆಲವರು ದೃಢಸಂಕಲ್ಪ ಮಾಡಿಕೊಂಡಿದ್ದರು. ಆನಂದನೂ ಆ ಕೆಲವರಲ್ಲೊಬ್ಬ.

ರಾಮುವೂ ಕಾಲೇಜಿಗೆ ಮತ್ತೆ ಹೋಗಲೇಬೇಕಾಯಿತು. ಮುಷ್ಕರ ಕೊನೆಗಂಡ ರೀತಿಯಿಂದ ಅವನೆದೆ ಕಿವಿಚಿ ಹೋಗಿತ್ತು. ಮುಷ್ಕರದ ಉತ್ಸಾಹ,

ಆಸೆ, ಭರವಸೆಗಳೆಲ್ಲಾ ಈಗ ಮಾಯ! ಎಲ್ಲರೂ ತಮ್ಮ ಕಲ್ಪನೆಯಲ್ಲಿ ಸ್ವಾತಂತ್ರ್ಯದ ಅರಮನೆ ಕಟ್ಟಿದ್ದರು. ಆದರೆ ಈಗ ಗುಳ್ಳೆಯೊಡೆದಿತ್ತು. ಹುಲಿ ಹಿಂಡಾಗಿದ್ದವರು ಕುರಿದಂಡಾಗಿದ್ದರು. ಅಧಿಕಾರಿಗಳೆಂದುದಕ್ಕೆಲ್ಲಾ ಮಾತಿಲ್ಲದೇ ತಲೆಬಾಗುತ್ತಿದ್ದರು. ಎಷ್ಟೋ ಮಂದಿ ತಾವು ಚಳುವಳಿಯಲ್ಲಿ ಇದ್ದೆವೆಂಬು ದನ್ನೇ ನೆನಪಿನಿಂದ ಅಳಿಸಿಬಿಡಲು ಪ್ರಯತ್ನಿಸುತ್ತಿದ್ದರು.

ರಾಮುವಿಗೆ ಆನಂದನದೇ ಮುಖ್ಯವಾಗಿ ಚಿಂತೆ! ಅವನೇನೋ ಸೆರೆ ಮನೆಯಲ್ಲಿದಾನೆ. ವಿದ್ಯಾರ್ಥಿಗಳೆಲ್ಲ ಮತ್ತೆ ಬಾಲಮುದುರಿಕೊಂಡು ಶಾಲೆ ಗಳಿಗೆ ಹಿಂತಿರುಗಿದರು. ಆದರೆ ಸೆರೆಮನೆಯಲ್ಲಿ ಉಳಿದಿರುವವರ ಬಾಳು ಹೇಗೆ—ಅವರ ನಾಳೆ ಹೇಗೆಂಬುದೇ ರಾಮುವಿನ ಮಹಾಸಮಸ್ಯೆ! ಒಂದೆ ರಡು ದಿನಪತ್ರಿಕೆಗಳಷ್ಟು ಬಿಟ್ಟರೆ ಮತ್ತೆ ಯಾರೂ ಅದರ ಕಡೆಗೆ ಗಮನವನೇ ಕೊಡುತ್ತಿರಲಿಲ್ಲ. ತಮ್ಮ ಬಾಳಿನಲ್ಲಿಯೇ ತಾವು ಭಾಗವಹಿಸಿದ ಒಂದು ಆಂದೋಲನವಾಯಿತು. ಅದರಲ್ಲಿ ತಾನಾಗಿಯೇ ಭಾಗವಹಿಸಿದ್ದೆನೆಂಬುದನ್ನೇ ಜನ ಮರೆಯಲು ಯತ್ನಿಸುತ್ತಿದ್ದರು. ಸೆರೆಮನೆಗೆ ಹೋಗಿ ಬಂದವರು ಕೆಲ ವರು "ಸದ್ಯ ಕತ್ತಲೆ ಕಳೆದು ಬೆಳಕಿಗೆ ಬಂದೆವಲ್ಲಾ" ಎಂದು ನಿಟ್ಟುಸಿರಿಟ್ಟು ಮೊದಲಿನ ಕೂಪಕರ್ಮ ಜೀವನದಲ್ಲಿ ಮುಳುಗಿದರು. ಮತ್ತೆ ಕೆಲವರು ಸೆರೆಮನೆಗೆ, ಹೋದವರನ್ನು ತೀವ್ರವಾಗಿ ಖಂಡಿಸುತ್ತಿದ್ದರು— "ಸೆರೆಗೆ ಹೋಗಿರೆಂದು ಅವರಿಗೆ ಹೇಳಿದವರಾರು? ಅವರ ತಿಳಿಗೇಡಿತನವನ್ನು ಅವರೇ ಅನುಭವಿಸಲಿ" ಎನ್ನುತ್ತಿದ್ದರು. ಇಂತಹ ವಾತಾವರಣದಲ್ಲಿಯೂ ಇಂತಹ ಸನ್ನಿವೇಶದಲ್ಲಿಯೂ ಜೈಲಿಗೆ ಹೋದವರಿಗಾಗಿ ರಾಮುವಿನ ಹಾಗೆಯೇ ಮಂದಿ ಕೊರಗುತ್ತಿದ್ದರು. ಆದರೆ ಜನಸಾಮಾನ್ಯ ಅಲಕ್ಷ ತೋರಿದಾಗ ಈ ನಾಲ್ಕು ಜನ ಏನು ತಾನೇ ಮಾಡಲು ಸಾಧ್ಯ?

ರಾಮುವೇನೋ ಪರೀಕ್ಷೆಗೆ ಹಣ ಕಟ್ಟಿದ. ಆದರೆ ಓದಲು ಮಾತ್ರ ಮನಸ್ಸೇ ಆಗುತ್ತಿರಲಿಲ್ಲ. ಮನಸ್ಸಿನಲ್ಲಿ ಒಂದು ಬಗೆಯ ನಿರಾಶೆ, ಅಸಹಾಯ ಭಾವನೆ ಮೂಡಿದ್ದುದರಿಂದ ಏನು ಮಾಡಲೂ ಆಗುತ್ತಲೇ ಇರಲಿಲ್ಲ. ಮನಸ್ಸಿಗೆ ಸ್ವಲ್ಪ ವಿರಾಮವಾದರೆ ಸಾಕು, ಆನಂದನಿಗಾಗಿ ಚಿಂತೆ. ಆನಂದನಿಗೆ ಒಂದೆ ರಡು ಕಾಗದಗಳನ್ನು ಬರೆದ. ಆದರೆ ಒಂದಕ್ಕಾದರೂ, ಆನಂದನಿಂದ ಉತ್ತರವೇ ಬರಲಿಲ್ಲ. ಆ ಕಾಗದಗಳು ಆನಂದನಿಗೆ ತಲುಪಿದವೋ ಇಲ್ಲವೋ

ಆದೂ ತಿಳಿಯದು ಚಿಂತೆ ತಡೆಯಿಡಲುಎಷ್ಟೆಷ್ಟು ಯತ್ನಿಸಿದರೂ ಸಾಗು ತ್ತಿರಲಿಲ್ಲ.

ಲಲಿತಾ ಮನೆಯ ಒಂದೊಂದು ಕೆಲಸ ಮಾಡುವಾಗಲೂ ಆನಂದ ನನ್ನು ನೆನೆದುಕೊಳ್ಳುತ್ತಿದ್ದಳು ಏನಾದರೂ ತಿಂಡಿಮಾಡಿದರೆ ಒಡನೆಯೇ ಅವನ ನೆನಪಾಗುತ್ತಿತ್ತು. "ಅವನು ಜೈಲಿನಲ್ಲಿ ಏನೂ ಇಲ್ಲದೆ ಸಂಕಟಪಡು ತ್ತಿದ್ದಾನೆ. ಅಂತಹ ಸಮಯದಲ್ಲಿ ನಾನಿಲ್ಲಿ ತಿಂಡಿ ತಿನ್ನುವುದೇ? ಅವನಿಗಿಲ್ಲ ದುದು ನನಗೇಕೆ?" ಎಂದುಕೊಂಡು ತಾನೂ ತಿನ್ನುತ್ತಿರಲಿಲ್ಲ.

ಒಂದು ಸಾರಿ ನರಸಿಂಹಯ್ಯ ಕೋಡುಬಳೆ ಮಾಡೆಂದರು. ಆನಂದನಿಗೆ ಕೋಡುಬಳೆಯೆಂದರೆ ಬಹಳ ಇಷ್ಟ. ಕೋಡುಬಳೆಮಾಡುತ್ತ ಲಲಿತ ಬಾಣ ಲೆಯ ಮುಂದೆ ಕುಳಿತಿದ್ದಳು ಆನಂದನ ನೆನಪಾಗಿ ಕಣ್ಣಿನಿಂದ ಒಂದುಹನಿ ನೀರು ಕುದಿಯುತ್ತಿದ್ದ ಎಣ್ಣೆಗ ಬಿದಿತು ತಕ್ಷಣನೇ ಎಣ್ಣೆಸಿಡಿದು ಮುಖ ಕ್ಕೊಂದು ತೊಟ್ಟು ಹಾರಿತು ಅವಳ ಪುಣ್ಯ ಮತ್ತೇನೂ ಆಗದೆ ಕೆನ್ನೆಯ ಮೇಲೊಂದು ಮಚ್ಚೆಯಾಗಿ ಉಳಿಯಿತು; ಅಷ್ಟೇ!

ನಿತ್ಯವೂ ಆನಂದ ಊಟಕ್ಕೆ ಕುಳಿತುಕೊಳ್ಳುತ್ತಿದ್ದ ಜಾಗದಲ್ಲಿಯೇ ನರಸಿಂಹಯ್ಯ ಈಗ ಕುಳಿತುಕೊಳುತ್ತಿದ್ದರು. ಅವರಿಗೆ ಬಡಿಸುತ್ತಾ ಲಲಿತಾ ಒಂದೊಂದು ಬಾರಿ "ಆನಂದ ಇಲ್ಲಿಯೇ ಊಟಕ್ಕೆ ಕುಳಿತುಕೊಳ್ಳುತ್ತಿದ್ದ" ಎಂದುಕೊಂಡು ಹಾಗೆಯೇ ನಿಂತುಬಿಡುತ್ತಿದ್ದಳು. ಇದರಿಂದ ಎಷ್ಟೋಬಾರಿ ನರಸಿಂಹಯ್ಯನವರಿಂದ ಬೈಗಳು ತಿಂದಿದ್ದಳು. ಆನಂದನ ಕೋಣೆಯ ಕಡೆಗ ನೋಡಿದರೇ ಕಣ್ಣಿನಲ್ಲಿ ನೀರೂರುತ್ತಿತ್ತು. ದಿನವೂ ಲಕ್ಷ್ಮೀ ಪೂಜೆ ಮಾಡು ವಾಗ "ಅವನನ್ನು ಸೌಖ್ಯವಾಗಿರಿಸು ತಾಯೀ" ಎಂದು ಬೇಡಿಕೊಳ್ಳು ತ್ತಿದ್ದಳು. ಅವನ ಬಿಡುಗಡೆಯಾಗಲಿ—ಬೇಗನೆ–ಬಿಡುಗಡೆಯಾದರೆ ಕುಂಕು- ಮಾರ್ಚನೆ ಮಾಡಿಸುತ್ತೇನೆಂದು ಚಾಮುಂಡೇಶ್ವರಿಗೆ ಹರಕೆ ಕಟ್ಟಿಕೊಂಡಳು. ಆದರೆ ಅವಳ ಈ ದುಃಖವೆಲ್ಲಾ ಮೌನದ ಸೆರೆಯ ಮರೆಗೆ! ತಾಯಿ ಅತ್ತಾಗ ಲೆಲ್ಲ ಅವರಿಗೆ ಸಮಾಧಾನ ಮಾಡುತ್ತಿದ್ದಳು. ಆದರೆ ಯಾರೂ ಕಾಣದಾಗ ತಾನೇ ಕಣ್ಣೀರು ಕರೆಯುತ್ತಿದ್ದಳು.

ಪಾರ್ವತಮ್ಮನವರದು ಇನ್ನೊಂದು ಬಗೆ. ಮೊದಲೇ ವಯಸ್ಸಾಗಿತ್ತು. ಜತೆಗೆ ಈ ದುಃಖವೂ ಸೇರಿ ಜರಿದು ಹೋಗಿದ್ದರು. ಯಾವಾಗಲೂ ಸುಮ್ಮನೆ

ಅಳುತ್ತಾ ಕುಳಿತಿರುವರು. ಒಂದೊಂದು ಬಾರಿ ತಮಗೆ ತಾವೇ ಸಮಾಧಾನ ಹೇಳಿಕೊಳ್ಳಲು ಯತ್ನಿಸುತ್ತಿದ್ದರು. "ಯಾರು ಯಾರು ಎಷ್ಟೆಷ್ಟು ಕೇಳಿ ಕೊಂಡು ಬಂದಿರುವರೋ ಅಷ್ಟೇ ಅವರಿಗೆ. ಹೋದ ಜನ್ಮದಲ್ಲಿ ನಾನು ಯಾವ ತಾಯಿಮಕ್ಕಳನ್ನಗಲಿಸಿದ್ದೆನೋ—ಯಾರ ಹೊಟ್ಟೆಯುರಿಸಿದ್ದೆನೋ! ಈಗ ದೇವರು ನನ್ನ ಹೊಟ್ಟೆಯುರಿಸುತ್ತಿದ್ದಾನೆ! ಗುಲಾಬಿಯ ಪೂಜೆಗೆ ಬದಲು ಕಣಗಿಲೆ ಹೂವು ಪೂಜೆಮಾಡಿ ಸುಖ ಕೇಳಿದರಾದೀತೇ? ಎಲ್ಲಾ ಕರ್ಮ ಫಲ" ಎಂದುಕೊಂಡೇ ಒಂದೇ ಸಮನಾಗಿ ಬಿಕ್ಕಿ ಬಿಕ್ಕಿ ಅಳುವರು. "ನೀನೇ ಗತಿ" ಯೆಂದು ದೇವರಿಗೆ ನೂರು ಬಾರಿ ನಮಸ್ಕರಿಸುವರು. ಗ್ರಹಚಾರ ಎಂದು ಬಿಡುಗಡೆಯೊ ಎಂದು ಜೀವಕ್ಕೆ ಹಾಯಿಬರುವುದೋ ಎಂದು ತಲೆಯ ಮೇಲೆ ಕೈಯಿಟ್ಟು ಕುಳಿತುಬಿಡುವರು. ಜೋಯಿಸರ ಬಳಿಗೆ ಹೋಗಿ ಜಾತಕ ತೋರಿಸಿಕೊಂಡು ಬರುವರು. ಆದರೆ ಯಾವುದರಿಂದಲೂ ಮನಸ್ಸಿಗೆ ಸಮಾಧಾನವಿಲ್ಲ. ಹೃದಯ ಸುಮ್ಮನಿರುತ್ತಿರಲಿಲ್ಲ. ಜೀವಕ್ಕೆ ಶಾಂತಿಯಿಲ್ಲ. ಕರುಳು ಒಂದೇ ಸಮನಾಗಿ ಕೊರೆಯುತ್ತಿತ್ತು. ದಿನೇ ದಿನೇ ಪಾರ್ವತಮ್ಮನವರು ಕೃಶರಾಗುತ್ತ ಬಂದರು

ಪಾರ್ವತಮ್ಮನವರು ಯಾರ ಮುಂದೆಯೂ ತಮ್ಮ ದುಃಖ ತೋಡಿ ಕೊಳ್ಳುತ್ತಿರಲಿಲ್ಲ. ಒಮ್ಮೊಮ್ಮೆ ಮಾತ್ರ ಲಲಿತಳ ಮುಂದೆ ಹೇಳಿಕೊಂಡು ಅಳುತ್ತಿದ್ದರು. ಆಗ ಲಲಿತ ಅವರಿಗೆ ಸಮಾಧಾನ ನೀಡುತ್ತಿದ್ದಳು ಲಲಿತ ಳಂತೂ ತನ್ನ ಮನಸ್ಸಿನ ಕೊರಗನ್ನು ಎಂದೂ ಆಡುತ್ತಿರಲಿಲ್ಲ. ಆದರೆ ಇಬ್ಬರ ಮುಖದಲ್ಲೂ ಉದಾಸ ಭಾವ,—ಬೇಸರ ಮೂಡಿತ್ತು. ಇಬ್ಬರನ್ನೂ ಕೊರಗು ಮೌನದಲ್ಲಿಯೇ ಕೊರೆಯುತ್ತಿತ್ತು.

## ೧೦

ಆನಂದ ಜೈಲಿಗೆ ಹೋಗಿ ಆಗಲೇ ಐದು ತಿಂಗಳಾಗಿತ್ತು. ಜೈಲಿನಲ್ಲಿ ರುವ ಪರಿಸ್ಥಿತಿ ಕುರಿತು ಯಾರೂ ಹೆಚ್ಚಿಗೆ ಚಿಂತೆಯನ್ನೇ ಮಾಡುತ್ತಿರಲಿಲ್ಲ. ವಿದ್ಯಾರ್ಥಿಗಳೆಲ್ಲ ತಮ್ಮ ಪಾಡಿಗೆ ತಾವು ಕಾಲೇಜಿಗೆ ಹೋಗುತ್ತಿದ್ದರು.

ರಾಮು ಕಾಲೇಜಿಗೆ ಅವಸರವಸರವಾಗಿ ಹೋಗುತ್ತಿದ್ದ. ಆಗಲೇ ಗಂಟೆ ಹೊಡೆದು ಹತ್ತು ನಿಮಿಷವಾಗಿತ್ತು. ಮನೆಯಿಂದ ಹೊರಡುವುದು ತಡ

ಆಗಿತ್ತು. ಕಾಲೇಜಿನ ಹೊರಬಾಗಿಲ ಬಳಿ ಬಂದು ಇನ್ನೇನು ಒಳಕ್ಕೆ ಹೋಗ ಬೇಕೆನ್ನುವುದರಲ್ಲಿಯೇ ಹಿಂದಿನಿಂದ ಯಾರೋ "ಸಾರ್" ಎಂದು ಕೂಗಿ ದಂತಾಯಿತು. ಎಳೆಯ ಧ್ವನಿ—ಯಾರಿರಬಹುದೆಂದು ಹಿಂತಿರುಗಿ ನೋಡಿದ ಸುಮಾರು ಹದಿಮೂರು ಹದಿನಾಲ್ಕು ವರ್ಷದ ಹುಡುಗ, ಖಾದಿಯ ಜುಬ್ಬಾ, ಖಾದಿಯ ಲುಂಗಿ ತೊಟ್ಟಿದ್ದ. ಎರಡೂ ಹರಿದು ಹೋಗಿದ್ದುವು. ಎಡಗೈಯಲ್ಲೊಂದು ಖಾದಿಯ ಚೀಲ, ಬಲಗೈಯಲ್ಲೊಂದು ಪತ್ರ.

"ಯಾರಪ್ಪಾ ?" ಎಂದು ರಾಮು ಅಲ್ಲಿಯೇ ನಿಂತ.

"ನಿಮಗೆ ಇವರು ಗೊತ್ತೇ ಸಾರ್ ?" ಎನ್ನುತ್ತಾ ಹುಡುಗ ಕೈಯಲ್ಲಿದ್ದ ಪತ್ರದ ಮೇಲಿನ ವಿಳಾಸ ತೋರಿಸಿದ

"ನೀನು ಯಾರಪ್ಪಾ ?" ಎನ್ನುತ್ತಾ ರಾಮು ಪತ್ರವನ್ನು ಕೈಗೆತ್ತಿ ಕೊಂಡ.

"ಇವತ್ತು ಬೆಳಿಗ್ಗೆ ಜೈಲಿನಿಂದ ಬಿಡುಗಡೆಯಾಯಿತು ಸಾರ್."

ರಾಮುವಿನ ಹೃದಯದ ಬಡಿತ ವಿಪರೀತ ಜೋರಾಯಿತು. ಮೈಯ ಲ್ಲೆಲ್ಲಾ ವಿದ್ಯುತ್ಸಂಚಾರವಾದಂತಾಯಿತು ಹುಡುಗನ ಕಡೆಗೆ ಗಮನವನ್ನೇ ಕೊಡಲಿಲ್ಲ. ಕೈ ಥರಥರ ನಡುಗುತ್ತಿತ್ತು. ಹುಡುಗ ಕಕ್ಕಾಬಿಕ್ಕಿಯಾದ

"ಇದೇಕೆ ಸಾರ್ ?" ಎಂದ ಗಾಬರಿಯಿಂದ.

ರಾಮು ತನ್ನ ಭಾವಪ್ರದರ್ಶನಕ್ಕೆ ತಾನೇ ನಾಚಿಕೊಂಡು "ಇದು ನನಗೇ ಬರೆದ ಪತ್ರ" ಎಂದ. ದನಿ ನಡುಗುತ್ತಿತ್ತು. ಅವಸರದಿಂದ ಲಕ್ಕೋಟೆ ಯನ್ನೊಡೆದು ಪತ್ರ ಹೊರತೆಗೆದ. ಅದನ್ನೋದುವುದರಲ್ಲಿ ಕಾಲೇಜಿಗೆ ಹೋಗುವುದೂ ಪಕ್ಕದಲ್ಲಿ ಆ ಹುಡುಗನಿರುವುದೂ ಮರೆತೇ ಹೋಯಿತು.

"ಪ್ರಿಯ ರಾಮೂ,

ಜೈಲಿಗೆ ಬಂದು ಸರಿಯಾಗಿ ಐದು ತಿಂಗಳು ಕಳೆಯಿತು. ಈ ದಿನ ಜನವರಿ ೨೬ನೆಯ ತಾರೀಕು. ಸ್ವಾತಂತ್ರ್ಯ ದಿನ! ನಾವೂ ಆಚರಿಸುತ್ತೇವೆ! ಆದರೆ ನೀನೇ ಯೋಚಿಸಿಕೋ—ಇರುವುದು ಸೆರೆಮನೆ, ಮಾಡುವುದು ಸ್ವಾತಂತ್ರ್ಯ ದಿನಾಚರಣೆ! ಎಷ್ಟು ಅಸಮಂಜಸ!

ಜೈಲಿಗೆ ಬಂದಾಗಿನಿಂದ ನಿನ್ನಿಂದ ಒಂದೂ ಕಾಗದ ಬರಲಿಲ್ಲ ಹೋಗಲಿ, ನೀನಾಗಿಯೇ ಬರೆಯದಿದ್ದರೆ ಬಿಡು; ನಾನು ಬರೆದ ಎರಡು ಕಾಗದಗಳಿಗೂ

ನಿನ್ನಿಂದ ಉತ್ತರವೇ ಬರಲಿಲ್ಲ. ಲಲಿತಳಿಂದಾಗಲೀ, ಅಮ್ಮನಿಂದಾಗಲೀ ಕಾಗದ ಬರಲಿಲ್ಲ. ನೀವೆಲ್ಲರೂ ನನ್ನನ್ನು ಮರೆತುಬಿಟ್ಟಿರೇನೋ ಎಂದು ಒಂದೊಂದು ಬಾರಿ ಎನಿಸುತ್ತದೆ. ಮನಸ್ಸಿಗೆ ಬಹಳ ಬೇಸರವೆನಿಸುತ್ತದೆ. ಆದರೂ ನಾನೇ ಮತ್ತೆ ಈ ಕಾಗದ ಬರೆಯುತ್ತಿದೇನೆ

ಜೈಲಿನ ಜೀವನವೇನೂ ಕಷ್ಟವಿಲ್ಲ. ಹೊತ್ತುಹೊತ್ತಿಗೆ ಕೂಳು ಬೀಳುತ್ತದೆ. ವಿಸ್ತಾರವಾದ ಪ್ರದೇಶ. ನಮ್ಮ ಕೋಣೆಗಳೂ ಸಣ್ಣ ಸಣ್ಣ ಮನೆಗಳ ಹಾಗೆಯೇ ಇವೆ ಸಂಜೆಯ ಹೊತ್ತು ಆಟಕ್ಕೂ ಸಾಕಷ್ಟು ಸೌಕರ್ಯವಿದೆ. ಜತೆಗಾರರೂ ಗೆಳೆಯರೂ ಬಹಳ ವಿಶ್ವಾಸ ತೋರಿಸುತ್ತಾರೆ. ಸ್ನೇಹ, ವಿಶ್ವಾಸ, ಸೌಹಾರ್ದಗಳಿಗೇನೂ ಕೊರತೆಯಿಲ್ಲ. ಓದಬೇಕೆಂದರೆ ಬೇಕಾದಷ್ಟು ಪುಸ್ತಕಗಳಿವೆ. ಆದರೆ ಈ ಸೌಕರ್ಯಗಳನ್ನೆಲ್ಲಾ ಉಪಯೋಗಿಸಿಕೊಂಡು ಹಾಯಾಗಿರಲು ಮನಸ್ಸೊಂದಿರಬೇಕು! ಮನಸ್ಸಿಗೆ ಶಾಂತಿಯಿದ್ದಿದ್ದರೆ ಇದೆಲ್ಲ ಬೇಕಾಗಿಯೇ ಇರಲಿಲ್ಲ. ಈಗ ಇವುಗಳೆಲ್ಲ ಇದ್ದೂ ಇಲ್ಲದಂತೆಯೇ! ಮನಸ್ಸಿಗೆ ಮಾತ್ರ ಶಾಂತಿ ಇದ್ದರೆ—

ನಿನಗೆ ತಿಳಿಯುವುದು ಕಷ್ಟ ರಾಮೂ, ಜೈಲಿನ ಹಕ್ಕಿಯ ಮನಸ್ಸು! ಎಷ್ಟು ರೋಸಿ ಹೋಗುತ್ತದೆ ಗೊತ್ತೇ? ನಮ್ಮವರಿಂದ, ನಮಗೆ ಹಿತ ತೋರುವ ತಳೆಯರಿಂದ, ನಮ್ಮ ಅಕ್ಕರೆಯ ವಸ್ತುಗಳಿಂದ ದೂರವಾಗಿ ಯಾರನ್ನೂ ಕಾಣದೆ ಪಂಜರದಲ್ಲಿ ಸಿಕ್ಕಿಬಿದ್ದ ಮನಸ್ಸು ಒಂದು ನಿಮಿಷವೂ ಸ್ಥಿರವಾಗಿರಲಾರದು. ಹಾಯಾಗಿ ಹಾರಾಡಿಕೊಂಡಿದ್ದ ಹಕ್ಕಿಯನ್ನು ಪಂಜರದಲ್ಲಿ ಎಸೆದರೆ ರೆಕ್ಕೆ ಕತ್ತರಿಸಿದಂತೆಯೇ! ಮನಸ್ಸು ಎಲ್ಲೆಲ್ಲಿಯೋ ಹರಿದಾಡುತ್ತದೆ, ಹಾರಾಡುತ್ತದೆ. ಆದರೆ ಏನೋ ಒಂದು ರೀತಿಯ ನೋವು. ಏನು ಮಾಡಿದರೂ ಆ ನೋವಿನ ಮುಸುಕನ್ನು ಕಿತ್ತೊಗೆಯುವುದು ಅಸಾಧ್ಯವಾಗಿದೆ.

ದಿನ ಕಳೆದಂತೆ ಜೈಲಿನ ಜೀವನ ಬೇಸರವಾಗುತ್ತದೆ. ಮನಸ್ಸು ಸ್ಥಿಮಿತದಲ್ಲಿಯೇ ಇರುವುದಿಲ್ಲ. ಎಲ್ಲಿಯಾದರೂ ದೂರದಲ್ಲಿ ದಿಗಂತದಾಚೆಗೆ ಹಾರಿ ಹೋಗೋಣವೇ ಎನಿಸುತ್ತದೆ ಆದರೆ— !

ಒಮ್ಮೊಮ್ಮೆ ಕೋಣೆಯ ಬಾಗಿಲಬಳಿ ನಿಂತು ಯೋಚಿಸುತ್ತೇನೆ. ಜಗತ್ತು ಒಂದು ದೊಡ್ಡ ಸೆರೆಮನೆಯೇ ಅಲ್ಲವೇ? ಸಾವಿರಾರು ಜೀವಗಳನ್ನು

ಹಿಡಿದು ಅವುಗಳ ತೇಜ, ಸತ್ವ, ಶಕ್ತಿಗಳನ್ನು ಅದುಮಿ, ವ್ಯಕ್ತಿತ್ವ ಪ್ರಕಟ ವಾಗದಂತೆ ಕೊಳೆಸುವ ಜಗತ್ತೂ ಒಂದು ಸೆರೆಮನೆಯೇ! ಎಷ್ಟೊಂದು ಜೀವ ಗಳು ಅದಕ್ಕಾಗಿಯೇ ಕಲ್ಪನೆಯ ರೆಕ್ಕೆಕಟ್ಟಿಕೊಂಡು ಜಗತ್ತಿನ ಜೈಲಿನಿಂದ ದೂರಹಾರಿ ಅಲ್ಲಿನ ಆನಂದ ಸವಿದು, ಕನಸು ಕನಲಿದಾಗ ದುಃಖಪಡುತ್ತಿಲ್ಲ?– ಹುಂ—ಈ ಮಾತೆಲ್ಲ ಏನೂ ಉಪಯೋಗವಿಲ್ಲದ ಮಾತು!

ಮನಸ್ಸಿನಲ್ಲಿ ಯಾವುದೋ ಒಂದು ರೀತಿಯ ತೆರವು. ದುಗುಡವೇ ಎಂದು ಹೇಳಲು ಸಾಗದು. ಅದು ಹೊರಜಗತ್ತಿನ ಗೀಳು ಕೂಡ ಅಲ್ಲ ಅದೆಂತಹದೋ ಹೊಸಭಾವನೆ, ಹೊಸಬಗೆಯ ಭಾವುಕತೆ! ಹಾಗೆ ಎದೆ ತೆರ ವಾದಂತೆ ಇದ್ದಕ್ಕಿದ್ದಂತೆ ಯಾವುದೋ ಹಳೆಯ ಹಾಡು ನೆನಪಿಗೆ ಒಂದು ಎದೆ ಕುಣಿದೇಳುತ್ತದೆ. ಹಾಡು ಅಷ್ಟು ಚೆನ್ನಾಗಿಲ್ಲದಿದ್ದರೂ ಆಗ ಮಾತ್ರ ಬಹಳ ಸುಂದರವಾಗಿ ತೋರುತ್ತದೆ. ಏನೋ ಮಧುರವಾಗಿ ತಂಗಾಳಿ ತೀಡಿ ದಂತೆ ಕೊಂಚಕಾಲ 'ಹಾಯಿ' ಯೆನಿಸುತ್ತದೆ!

ಜೈಲಿನ ಗೋಡೆಗಳು ನನ್ನ ದೇಹವನ್ನು ಕಟ್ಟಬಹುದು, ಅಡ್ಡಯಿಸ ಬಹುದು. ಆದರೆ ಮನಸ್ಸು ಮಾತ್ರ ಸ್ವತಂತ್ರ ದಿಗಂತವನ್ನೇನೋ ಜೈಲಿನ ವಿಕೃತ ಕಲ್ಲಿನ ಗೋಡೆಗಳು ಮುಚ್ಚಿವೆ. ಆದರೆ ಒಳಗಣ್ಣಿಗೆ ಎಂತೆಂತಹುದೋ ಸುಂದರ ದಿಗಂತಗಳು ಕಾಣುತ್ತಿವೆ. ದೇಹ ಅದರ ವಶವಾದರೂ ನನ್ನ ಹೊಂಗನಸುಗಳು ಎಂದೆಂದಿಗೂ ನನ್ನವೇ!

ನೊಂದ ಹೃದಯ ತನ್ನ ನೋವನ್ನೆಲ್ಲ ಇಲ್ಲಿ ಕಾರುತ್ತಿದೆ. ಬೇಸರವಾದರೂ ಓದಿಕೋ, ರಾಮು. ನಿನಗಲ್ಲದೆ ಮತ್ತಾರಿಗೆ ತಾನೇ ಹೇಳಿಕೊಳ್ಳಲಿ ? ಒಳ ಗಿನ ದುಃಖವನ್ನು ಹೊರಹಾಕದಿದ್ದರೆ ನೋವು ಜೀವನವನ್ನು ಹುಳು ಹೂವನ್ನು ಕೊರೆದಂತೆ ಕೊರೆದು ಬಿಡುತ್ತದೆ.

ನಿನ್ನ ಮಾತುಗಳು ಒಂದೊಂದೂ ಕಿವಿಯಲ್ಲಿನ್ನೂ ಗುಂಯ್ಗುಟ್ಟುತ್ತಿವೆ. ಮನಸ್ಸಿನಲ್ಲಿ ಪ್ರತಿಧ್ವನಿತವಾಗುತ್ತಿವೆ. ನೀನು ನನಗೆ ನಿಜವಾಗಿಯೂ ಗುರು. ಬಾಳೆಲ್ಲ ಕಣ್ಣೀರೆಂದುಕೊಂಡಿದ್ದ ನನಗೆ ಬೆಳಕು ತೋರಿಸಿದೆ. ಜೀವನದಲ್ಲಿ ಪ್ರೇಮ, ವಿಶ್ವಾಸ, ಮಮತೆಗಳಿಲ್ಲವೆಂದಿದ್ದವನಿಗೆ ಹೃದಯಕೊಟ್ಟು ಮಣ್ಣನ್ನು ಮೂರ್ತಿಮಾಡಿದ ಕಲೆಗಾರ ನೀನು. ನನ್ನಿಂದ ಇಂದೇನಾದರೂ ಸೇವೆಯಾಗಿ

ದ್ದರೆ ಅದೆಲ್ಲಾ ನಿನ್ನ ಕೈವಾರ. ಅಂತಹುದರಲ್ಲಿ ನಿನ್ನ ಬಳಿಯಲ್ಲದೆ ಮತ್ತಾರ ಹತ್ತಿರ ನನ್ನ ಹೃದಯದ ನೋವನ್ನು ತೋಡಿಕೊಳ್ಳಲಿ ?

ಜೈಲಿನ ಜೀವನದಲ್ಲಿ ಉತ್ಸಾಹ ಉಲ್ಲಾಸ ತಗ್ಗಲೇ ಇಲ್ಲ. ಮನಸ್ಸಿಗೇನೂ ಅಂತಹ ಬೇಸರವೂ ಇರಲಿಲ್ಲ. ಉಳಿದ ಹುಡುಗರು ಹಿಂತಿರುಗಿದರೂ ಚಿಂತೆಯಿಲ್ಲ. ನನ್ನ ಆತ್ಮದ ಆಣತಿಯಂತೆ ನಾನು ನಡೆದಿರುವೆನೆಂಬ ಆತ್ಮಬಲ, ಚಿತ್ತಸ್ಥೈರ್ಯವಿತ್ತು. ಆದರೆ ಈಚೆಗೆ ಕೆಲವು ದಿನಗಳಿಂದ ಮನಸ್ಸಿನಲ್ಲಿ ಅಶಾಂತಿ—ಅಸ್ಥಿರತೆ.

ಬೆಳಗ್ಗೆ ಎದ್ದು ಹೊರಟರೆ ಸೂರ್ಯೋದಯ ! ಆದರೆ ಉದಯ ಸೂರ್ಯನ ಕೆಂಬಣ್ಣದ ಎಳೆಗಿರಣಗಳಲ್ಲಿ ನಲಿಯುವ ಭಾಗ್ಯ ನಮಗಿಲ್ಲ! ಮುಗಿಲಿನಲ್ಲಿ ಓಲಾಡುತ್ತಿರುವ ಕೆಂಪಂಚಿನ ಮೋಡ ಕಂಡು ಆದರ ಹಿಂದೆಯೇ ಅಡಗಿಬಿಡೋಣವೇ ಎನಿಸುತ್ತದೆ. ಸೆರೆಮನೆಯ ಗೋಡೆಯ ಮೇಲೆ ಕುಳಿತ ಅಳಿಲಿನ ಮರಿ ಈ ಕಡೆ ಆ ಕಡೆ ನೋಡಿ ಯೋಚಿಸಿ ಕೊನೆಗೆ ಹೊರಗಡೆಗೇ ಹಾರಿ ಮಾಯವಾದಾಗ ನಾನಾದರೂ ಆ ಅಳಿಲಿನ ಮರಿಯಾಗಿದ್ದರೆ ಎನಿಸುತ್ತದೆ. ಕಣ್ಣೀರಿನ ಪರೆಯ ಮೂಲಕ ಕಣ್ಣು ದಿಗಂತದಲ್ಲೇನನ್ನೋ ಕಾಣಬಯಸುವುದು. ಮನಸ್ಸು ಅಸ್ಥಿರ, ಚಂಚಲ. ಹೊಸ ಹೊಸ ಜೀವಗಳನ್ನು ಹೊಸ ಹೊಸ ತಾವುಗಳನ್ನು ಹುಡುಕಿಕೊಂಡು ಹಾತೊರೆಯುತ್ತದೆ. ಹೊರ ಜಗತ್ತಿಗೂ ಇಲ್ಲಿಗೂ ಇರುವ ಸಂಬಂಧವೆಂದರೆ ತೋಟದಲ್ಲಿ ಒಂದು ದೊಡ್ಡ ಮಾವಿನ ಮರವಿದೆ, ಅದನ್ನೇರಿದರೆ ಊರೆಲ್ಲ ಕಾಣಿಸುತ್ತದೆ. ನಾನೂ ಎಷ್ಟೋ ಬಾರಿ ಆ ಮರವನ್ನೇರಿ ನೋಡಿ ಮನಸ್ಸಿನ ಚಪಲ ತೀರಿಸಿಕೊಂಡಿದ್ದೇನೆ. ಆದರೆ ಅದರಿಂದ ಮನಸ್ಸಿಗೇನೂ ಶಾಂತಿಯಿಲ್ಲ!

ಮೊನ್ನೆ ಏನೋ ಯೋಚನೆ ಮಾಡುತ್ತಿದ್ದೆ. ಹಾಗೆಯೇ ರಾಮು ಚೆನ್ನಾಗಿ ಓದುತ್ತಿರುವನೋ ಇಲ್ಲವೋ ಎಂದು ಯೋಚಿಸಿಕೊಂಡೆ ನಾವಿಬ್ಬರೂ ಬೆಳಗಿನ ಜಾವ ಬೆಟ್ಟದ ಕಡೆಗೆ ಹೋದುದು ನೆನಪಿಗೆ ಬಂತು. ನೀನು ಆಗ ಹೇಳಿದುದೆಲ್ಲಾ ಇನ್ನೂ ಕಿವಿಯಲ್ಲಿ ಧ್ವನಿಸುತ್ತದೆ. "ಬೆಳಗಾಗುವ ಮೊದಲು ಮಂಜು ಎಲ್ಲವನ್ನೂ ಮುಸುಕಿದೆ. ಮುಂದೇನಿದೆಯೆಂದು ಗೊತ್ತಾಗುವುದೇ ಇಲ್ಲ. ಆದರೆ ಆ ಮಂಜಿನ ತೆರೆಯೇ ನಿಜವಾದುದೆಂದು ಭಾವಿಸಲು ಸಾಧ್ಯವಿಲ್ಲ. ಹಿಂದಿನ ನೈಜತೆ! ಹಾಗೆಯೇ ನಿರಾಸೆಯ ಮಂಜಿನ ಹಿಂದೆ ಮನುಷ್ಯ

ಹೃದಯದ ಆಸೆ ಅಡಗಿದೆ. ಆ ಮಂಜನ್ನು ದೂರ ಹಾರಿಸಿ ಅದನ್ನು ಅರಿಯಬೇಕು!"—ನಿಜ ರಾಮು, ನಿನ್ನ ಮಾತು ಶತಶಃ ನಿಜ!

ಮಾರ್ಚ ೨೦ನೆಯ ತಾರೀಕು ನನ್ನ ಹುಟ್ಟಿದ ಹಬ್ಬ. ಆ ವೇಳೆಗೆ ಏನಾದರೂ ಹೊರಗಿರುವೆನೋ ಇಲ್ಲವೋ ಒಂದೂ ತಿಳಿಯದು- ಇನ್ನು ಜೈಲಿನಲ್ಲೇ ಇದ್ದರೆ ಆ ದಿನ ಬೆಳಗ್ಗೆ ಜೈಲಿನ ಬಳಿಗೆ ಬಾ! ಅದಕ್ಕೆ ಮೊದಲು ಬರಬೇಡ. ಈ ತೊಂದರೆ ಕ್ಷಮಿಸು. ನನ್ನಿಂದ ನಿಮಗೆಲ್ಲ ಎಷ್ಟೊಂದು ತೊಂದರೆ!

ರಾಮು, ಪತ್ರ ಮುಗಿಸುವ ಮುಂಚೆ ಇನ್ನೊಂದೆರಡು ಮಾತು. ಅಂದು ನಿನಗೆ ಹೇಳಿದ್ದೆನಲ್ಲಾ—ಆಕೆಯ ವಿಷಯ. ನಾನೂ ಆಕೆಯೂ ಜಗಳವಾಡಿದುದು ಈಚೆಗೆ ಆಕೆಯ ನೆನಪು ಆಗಾಗ ಬರುತ್ತಿದೆ. ಆಕೆಯ ಹೆಸರು ಅನಸೂಯಾ. ಆದರೆ ನನಗೆ ನಾನೇ ಆಕೆಯನ್ನು "ಅನು, ಅನು," ಎಂದುಕೊಳ್ಳುತ್ತೇನೆ ಆಕೆಯನ್ನು ನೆನೆದಾಗಲೆಲ್ಲ—'ಅನು' ಎಂದುಕೊಂಡಾಗಲೆಲ್ಲ ಮೈ ಪುಲಕಗೊಳ್ಳುತ್ತದೆ. ಯಾವುದೋ ಅವ್ಯಕ್ತದಿಂದ ಅನಂತ ಮಾಧುರ್ಯದ ಹಾಡು ಹೃದಯದ ಕಡೆಗೆ ಹರಿಯುತ್ತಿದೆ. ಆಗಿನ ಮನಸ್ಸಿನ ಸ್ಥಿತಿಯನ್ನು ತಿಳಿಸುವುದ ಬಹಳ ಕಷ್ಟ. ಎದೆ ಕಲಕಿ ಮನಸ್ಸು ಕದಡುತ್ತದೆ—ಆದೇಕೋ!

ಮೊದಲು ನನಗೆ ಹೀಗಾದುದು ಈಗೊಂದೆರಡು ತಿಂಗಳ ಹಿಂದೆ ಇರಬಹುದು. ಒಂದು ರಾತ್ರಿ ಆಕಾಶದ ಕಡೆಗೇ ನೋಡುತ್ತಾ ಹಾಸಿಗೆಯ ಮೇಲೆ ಮಲಗಿದ್ದೆ. ಇದ್ದಕ್ಕಿದ್ದಂತೆ ಒಂದು ಮೋಡ—ಕಪ್ಪು ಮೋಡ, ಬೆಳ್ಳಿಯಂಚಿನದು ಆಕಾಶದಲ್ಲಿ ಗಾಂಭೀರ್ಯದಿಂದ ಮೆಲ್ಲ ಮೆಲ್ಲನೆ ತೇಲಿಹೋಗುತ್ತಿತ್ತು ನನಗೇನಾಯಿತೋ ಏನೋ ಆ ಮೋಡ ಮರೆಯಾಗಿ ಅದರ ಹಿಂದಿನಿಂದ ಅನುವಿನ ಮುಖ ಕಾಣಿಸಿತು. ಏನೇನು ಮಾಡಿದರೂ ಆಕೆಯನ್ನು ಮರೆಯಲು ನನ್ನಿಂದಾಗಿಲ್ಲ. ಎಲ್ಲೆಲ್ಲಿಯೂ ಆಕೆಯ ರೂಪವೇ ಕುಣಿಯುತ್ತದೆ. ಪುಸ್ತಕ ತೆರೆದರೆ ಪುಟಗಳಂಚಿನಿಂದ ನಗುನಗುತ್ತಾ ಹೊರಬೀಳುವಳು ಅನು! ಮುಖ ತೊಳೆಯಲು ಹೋದರೆ ನಲ್ಲಿಯ ನೀರಿನ ಬೊಟ್ಟುಬೊಟ್ಟಿನಲ್ಲಿಯೂ ಅವಳದೇ ಪ್ರತಿಬಿಂಬ! ಹೇಗೆ ಹೇಗೆ ತಿರುಗಿದರೂ ಆಕೆಯೇ! ಅದೇ ದೃಶ್ಯ! ಆಕೆಯ ಅಂದಿನ ನಿಲುವಿನ ಸೊಬಗು, ಬಿನ್ನಾಣದ ಮಾತು, ಬಿಂಕದ ನಗೆ ಸಡಗರದ ನಡಿಗೆ—ಕಪ್ಪು ಸೀರೆ, ಬೆಳ್ಳಿಯಂಚು, ಮುಗಿಲು ಬಣ್ಣದ ರವಿಕೆ ಯಾರನ್ನಾದರೂ ಮುಗ್ಧಗೊಳಿಸುವ ಆ ಕೆಂದುಟಿಗಳ ಮೇಲೆ ಸುಳಿದು

ಸುಳಿಯುದಂತಿರುವ ಆ ನಗೆಯು ನೆರಳು— ಅದರ ಸೆಳೆತ! ಆ ಮುಖದ ಮೇಲೆ ಗಾಳಿಯುಲುಗಾಡಿಸಿ ತಂದಿದ್ದ ಕುರುಳುಗಳ ಕುಣಿತ!—ಆ ದಿನವೆಲ್ಲಾ ಆಕೆಯೇ ನನ್ನ ಕಣ್ಣ ಮುಂದೆ ಸುಳಿಯುತ್ತಿದ್ದಳು. ಕೊಂಚ ದಿನಗಳಾದ ಮೇಲೆ ಅಂದಿನ ಆ ಕಾತರತೆ ತಗ್ಗುತ್ತಾ ಬಂತು. ಆದರೂ ಆಗಾಗ ಆಕೆಯ ನೆನಪು ಬಂದು ಹೃದಯದಲ್ಲೊಂದು ಮಧುರ ನೋವು ಗೂಡು ಮಾಡಿಕೊಳ್ಳುತ್ತದೆ.

ಆಕೆಯನ್ನಂತೂ ಕ್ಷಮೆ ಬೇಡಿಕೊಳ್ಳಲಾಗಲೇ ಇಲ್ಲ. ಆ ದಿನ ನಾನು ಮಾಡಿದುದು ತಪ್ಪೆಂದು ನನಗೆ ಈಗ ಖಂಡಿತವಾಗಿದೆ. ಆಕೆ ನನ್ನನ್ನು ಕ್ಷಮಿಸಿ ರುವಳೋ ಇಲ್ಲವೊ—ಅಂತೂ ಅದೊಂದು ಹೊಸ ಚಿಂತೆ!

ಮುಂದೇನು? ಅದೊಂದು ದೊಡ್ಡ ಸಮಸ್ಯೆ. ಕಾಲದ ಮುಚ್ಚಿದ ಕೈ ಬಿಚ್ಚಿದಾಗ ನಮಗೆ ಸಿಗುವುದೇನೋ—ಹೂವಿನ ಹಾರವೋ ಹಾವಿನ ಹೆಡೆಯೋ— ಯಾರು ಹೇಳಬಲ್ಲರು?

ನಿನ್ನ ಪ್ರಿಯ

—ಆನಂದ"

ರಾಮು ಪತ್ರವನ್ನೋದಿ ಮುಗಿಸಿದ. ಮನಸ್ಸಿನಲ್ಲಿ ಯೋಚನಾತರಂಗ ಭುಗಿಲ್ಲನೆದ್ದಿತು. ಆ ಗುಂಗಿನಲ್ಲೇ ಮೈಮರೆತು ನಿಂತ ಅವನಿಗೆ ಆ ಹುಡುಗ ಕೂಗಿದಾಗಲೇ ಎಚ್ಚರ. ಪತ್ರವನ್ನು ಮಡಿಸಿ ಜೇಬಿನಲ್ಲಿಟ್ಟುಕೊಂಡು ಆ ಹುಡುಗನ ಕಡೆ ತಿರುಗಿದು

"ನಿನ್ನ ಹೆಸರೇನು ಮಗು?" ಎಂದ ರಾಮು.

"ಶಿವಶಂಕರ ಸಾರ್" ಎಂದ ಹುಡುಗ.

"ಬಾ ಶಿವು" ಎನ್ನುತ್ತಾ ರಾಮು ಅವನನ್ನು ಹೋಟಲಿಗೆ ಕರೆದು ಕೊಂಡು ಹೋದ. ಹುಡುಗ ಬೆಳಿಗ್ಗೆ ಜೇಲಿನಿಂದ ಹೊರಬಂದವನು ಬಹಳ ಹಸಿದಿದ್ದ. ರಾಮು ಹೊಟ್ಟೆತುಂಬ ತಿಂಡಿ ಕೊಡಿಸಿದ. ಇಬ್ಬರೂ ಕಾಫಿ ಕುಡಿದರು. ಹುಡುಗ ಬೆಳಿಗ್ಗೆಯಿಂದ ತನ್ನನ್ನು ಕಾಲೇಜಿನ ಹುಡುಗರು ಹಾಸ್ಯ ಮಾಡಿದುದನ್ನು, ರಾಮುವಿನ ಹುಡುಕಾಟದಲ್ಲಿ ನಾನು ಅನುಭವಿಸಿದ ಹಲವಾರು ಇತರ ತೊಂದರೆಗಳನ್ನು ಸಂಕೋಚಪಡುತ್ತಾ ಹೇಳಿದ.

"ಆನಂದ ಹೇಗಿದಾನೆ ಶಿವು?" ಎಂದ ರಾಮು.

"ಮೊದಲು ಮೊದಲು ನಮ್ಮೆಲ್ಲರ ಜತೆಯಲ್ಲೂ ಮಾತನಾಡುತ್ತಿದ್ದರು ಸಾರ್. ನಾನೂ ಅವರೂ ಒಂದೇ ಬ್ಯಾರಕ್ಕಿನಲ್ಲಿ ಒಂದೇ ಕೋಣೆಯಲ್ಲಿದ್ದವು. ಮೊದಲು ಮೊದಲು ಮೈಕೈ ತುಂಬಿಕೊಂಡಿದ್ದರು. ಆದರೆ ಈಗ ಒಂದು ಒಂದೂವರೆ ತಿಂಗಳಿಂದ ವಿಪರೀತ ಇಳಿದು ಹೋಗಿದಾರೆ. ಯಾರೊಂದಿಗೂ ಸರಿಯಾಗಿ ಮಾತಿಲ್ಲ—ಯಾರ ಜತೆಗೂ ಸೇರುವುದಿಲ್ಲ. ಮೊದಲು ಆಟಪಾಟ ವೆಂದರೆ ಬಹಳ ಉತ್ಸಾಹ ತೋರಿಸುತ್ತಿದ್ದರು. ಆಟಕ್ಕೆ ಬರುವುದನ್ನೇ ಬಿಟ್ಟು ಬಿಟ್ಟರು. ಮನಸ್ಸಿಗೇನೋ ಯೋಚನೆ ಹಿಡಿದು ಕುಗ್ಗಿ ಹೋಗಿದಾರೆ ಸಾರ್."

"ಹೂಂ" ಎಂದ ರಾಮು.

"ನಾನೇ ನೋಡಿದ್ದೇನೆ ಸಾರ್. ಒಂದು ದಿನ ಎರಡು ಗಂಟೆಯ ಹೊತ್ತು ಒಂದೇ ಸಮನಾಗಿ ಆಕಾಶವನ್ನೇ ದಿಟ್ಟಿಸುತ್ತಾ ಕುಳಿತಿದ್ದರು. ಹೀಗೆಯೇ ಎಷ್ಟೋ ದಿನ ಮೋಡವೊಂದನ್ನೇ ದಿಟ್ಟಿಸುತ್ತಾ ನಿಂತಿರುತ್ತಿದ್ದರು. ನಾವೆಲ್ಲರೂ ಎಷ್ಟೊಂದು ಕೇಳಿದರೂ ಎಷ್ಟೊಂದು ಪ್ರಯತ್ನಿಸಿದರೂ ನಮಗೆ ಹೇಳಲಿಲ್ಲ. ಸುಮ್ಮನೆ ಮಾತನಾಡದೆ, ನಮ್ಮ ಮಾತಿಗೆ ಗಮನವನ್ನೇ ಕೊಡದೆ ಕುಳಿತಿರುತ್ತಿದ್ದರು. ಬಹಳ ಒತ್ತಾಯ ಮಾಡಿದರೆ "ಏನೂ ಇಲ್ಲ" ಎನ್ನುತ್ತಿದ್ದರು. ದಿನೇ ದಿನೇ ಇಳಿದು ಈಗಂತೂ ನೋಡಲಾಗುವುದಿಲ್ಲ—ಅನ್ನುವ ಹಾಗಾಗಿದಾರೆ. ಕಣ್ಣುಗಳು ಪಾತಾಳ ಹುಡುಕಿಕೊಂಡು ಹೋದ ಹಾಗಿವೆ. ಗಲ್ಲಗಳಂತೂ ಸಂಪೂರ್ಣವಾಗಿ ಬತ್ತಿ ಹೋಗಿವೆ. ನಿದ್ರೆಯಂತೂ ಅಲ್ಲವೇ ಇಲ್ಲ. ರಾತ್ರಿ ರಾತ್ರಿಯೆಲ್ಲಾ ದೀಪ ಉರಿಸಿಕೊಂಡು ಓದುತ್ತಾ ಕುಳಿತಿರುತ್ತಾರೆ ಸಾರ್. ನಮಗೇನೂ ತೋಚುವುದೇ ಕಷ್ಟವಾಯಿತು. ನೋಡಿದರೆ ಈಗಲೋ ಆಗಲೋ ಸಾಯುವ ಹಾಗಾಗಿ ಹೋಗಿದಾರೆ.

ರಾಮುವಿಗೆ ಶಿವುವಿನ ಮಾತಿನಿಂದ ಬಹಳ ಗಾಬರಿಯಾಯಿತು. ಆನಂದನ ಮನಸ್ಸಿನ ಸ್ಥಿತಿ ಇಷ್ಟೊಂದು ವಿಷಮಿಸಿದೆಯೆಂದು ಅವನು ಎಣಿಸಿರಲಿಲ್ಲ.

"ಒಂದೊಂದು ಸಾರಿ ಕನವರಿಸುತ್ತಾ ನಾಲ್ಕೈದು ಹೆಸರು ಕೂಗಿದರು ಸಾರ್" ಎಂದ ಶಿವು.

“ ಆಂ ? ಯಾವ ಹೆಸರು ? ”

“ ಒಂದು ದಿನ ರಾತ್ರಿ ನಾನು ಅವರ ಪಕ್ಕದಲ್ಲಿ ಮಲಗಿದ್ದೆ ಸಾರ್. ಹದಿನೈದು ದಿನಗಳಿಂದ ನಿದ್ರೆಯೇ ಮಾಡಿರಲಿಲ್ಲ ಅವರು. ಒಂದೇ ಸಮನಾಗಿ ರಾತ್ರಿಯೆಲ್ಲಾ ಓದುತ್ತಿದ್ದರು. ಅದರಿಂದ ಜ್ವರ ಬಂದಂತಾಗಿ ನಾಲ್ಕೈದು ದಿನ ಗಳಿಂದ ಹಾಸಿಗೆ ಹಿಡಿದಿದ್ದರು. ಜ್ವರ ವಿಪರೀತವಾಗಿತ್ತು. ನಮ್ಮ ಕೋಣೆಯ ವರೆಲ್ಲಾ ಅವರನ್ನು ನೋಡಿಕೊಳ್ಳುವುದಕ್ಕೆಂದು ಸರದಿ ಮಾಡಿಕೊಂಡಿದ್ದೆವು. ನಮಗೆಲ್ಲರಿಗೂ ಅವರನ್ನು ಕಂಡರೆ ಬಹಳ ವಿಶ್ವಾಸ ಸಾರ್. ಆ ದಿನ ನನ್ನ ಸರದಿ. ನಾನು ಎಚ್ಚರವಾಗಿದ್ದೆ. ಆಗ ಅವರು ನಿದ್ರೆಯ ಜೊಂಪಿನಲ್ಲಿ ಕನವರಿಸಿಕೊಂಡರು. ಐದಾರು ಸಾರಿ ‘ ಲಲಿತ, ಅಮ್ಮಾ ’ ಎಂದು ಕೂಗಿದರು ಒಂದೆರಡು ಬಾರಿ ‘ ರಾಮು, ರಾಮು, ಅನು ನನ್ನನ್ನು ಕ್ಷಮಿಸಿರುವಳೇ ರಾಮು ” ಎಂದರು. ಬಹಳ ಸಾರಿ ‘ ಅನು, ಅನು ’ ಎನ್ನುತ್ತಿದ್ದರು ಸಾರ್” ರಾಮುವಿನ ಮುಖ ಈ ಮಾತಿನಿಂದ ಮತ್ತೂ ಗಂಭೀರವಾಯಿತು.

“ ಈ ಕಾಗದವನ್ನು ಮೊದಲೊಂದು ಬಾರಿ ಬರೆದುಕೊಟ್ಟಿದ್ದರು. ಮತ್ತೆ ಹಿಂದಿರುಗಿ ಕೇಳಿ ತೆಗೆದುಕೊಂಡು ಹರಿದೆಸೆದು ಬಿಟ್ಟರು. ಈ ದಿನವೆಲ್ಲಾ ಬೆಳಗಿನ ಜಾವ ಒಂದೇ ಸಮನಾಗಿ ಶತಪಥ ಸುತ್ತುತ್ತಿದ್ದರು. ಕೊನೆಗೆ ನಾನು ಹೊರಡುವ ಹತ್ತು ನಿಮಿಷದ ಮುಂಚೆ ಮತ್ತೆ ಬರೆದುಕೊಟ್ಟರು. “ ಎಂದು ಶಿವು ಮುಂದುವರಿಸಿದ.

ರಾಮು ಶಿವೂನನ್ನು ಕಳಿಸಿಕೊಟ್ಟು ಕಾಲೇಜಿಗೆ ನಡೆದ. ಮನಸ್ಸಿನಲ್ಲಿ ಒಂದೇ ಸಮನಾಗಿ ಚಿಂತೆ. ರಾಮುವಿನ ಮನಸ್ಸಿನ ಅನುಮಾನ ಕೊನೆಗೂ ನಿಜವಾಗಿಯೇ ಪರಿಣಮಿಸಿತ್ತು. ಆನಂದ ಅನಸೂಯಳನ್ನು ಮರೆಯುವ ಬದಲು ಈ ರೀತಿ ಮನಸ್ಸಿಗೆ ಹಚ್ಚಿಕೊಂಡುದು ಹೇಗೆ ಬಗೆ ಹರಿದೀತೋ ಎಂದೇ ರಾಮುವಿನ ಯೋಚನೆ. ಆನಂದನಿಗೆ ಅನುವಿನಲ್ಲಿ ಅನುರಾಗ—ಆದರೆ ಅದರ ಕೊನೆ ಹೇಗೆ ? “ ಹೂವಿನ ಹಾರವೋ ಹಾವಿನ ಹೆಡೆಯೋ! ” ರಾಮುವಿನ ಈ ಚಿಂತೆಗೆ ಸ್ವಲ್ಪವಾದರೂ ಬೆಲೆ ಕೊಡದೆ ಕಾಲೇಜಿನ ಗಡಿಯಾರದ ಗಂಟೆ ಹನ್ನೆರಡು ಹೊಡೆಯಿತು !

## ೧೧

ರಾಮುವಿಗೆ ಆನಂದನನ್ನು ಗುರುತು ಹಿಡಿಯುವುದೇ ಕಷ್ಟವಾಯಿತು. ಕ್ಷಯರೋಗ ಬಂದವನಂತಾಗಿ ಹೋಗಿದ್ದ ಆನಂದ. ಅವನನ್ನು ಕಂಡೊಡನೆಯೇ ರಾಮುವಿಗೆ ಸಂತೋಷವೂ ಆಯಿತು, ದುಃಖವೂ ಆಯಿತು. ಸದ್ಯ, ಕೊನೆಗೊಮ್ಮೆ ಬಿಡುಗಡೆಯಾದನಲ್ಲಾ ಎಂದು ಸಂತೋಷ. ಆದರೆ ಹೇಗಿದ್ದವನು ಹೀಗಾಗಿರುವನಲ್ಲಾ ಇನ್ನು ಮುಂದೆಯೂ ಹೀಗೆಯೇ ಉಳಿದರೆ ಎಂದು ದುಃಖ. ಇಬ್ಬರಿಗೂ ಕೊರಳು ಬಿಗಿಯಿತು. ಒಬ್ಬರ ಬಾಯಿಂದಲೂ ಮಾತೇ ಹೊರಡದು. ಮಾತಾಡಲು ಬೇಕಾದಷ್ಟು ವಿಷಯ ತುಂಬಿತ್ತು. ಆದರೆ ಅದನ್ನು ಮಾತಿನಲ್ಲಿ ಮೂಡಿಸಲು ಇಬ್ಬರಿಗೂ ಸಾಗದು. ಮೌನವೇ ಮಾತಿಗಿಂತ ಹೆಚ್ಚು ಅರ್ಥಪೂರ್ಣವಾಗಿತ್ತು. ಆದರೆ ಮೌನದ ಕಟ್ಟೆ ಒಂದು ಬಾರಿ ಒಡೆದರೆ ಮಾತು ಹುಚ್ಚು ಹೊಳೆಯಾಗಿ ಹರಿಯುತ್ತದೆ.

ಇಬ್ಬರೂ ನೇರವಾಗಿ ಅಂಚೆಯ ಕಚೇರಿಗೆ ಹೋಗಿ ಮೈಸೂರಿಗೆ ತಂತಿ ಕೊಟ್ಟರು. ರಾಮುವೂ ತನ್ನೊಂದಿಗೆ ಬರಬೇಕೆಂದು ಆನಂದನ ಹಟ. ಪರೀಕ್ಷೆ ಬಹಳ ಹತ್ತಿರ, ಈಗ ಬರುವುದು ಕಷ್ಟವೆಂದು ರಾಮು. ಕೊನೆಗೂ ರಾಮುವೇ ಸೋತ. "ಈ ದಿನ ಬಿಡುಗಡೆಯಾಯಿತು. ನಾಳೆ ಇಬ್ಬರೂ ಬರುತ್ತೇವೆ" ಎಂದು ತಂತಿಕೊಟ್ಟು ಇಬ್ಬರೂ ಅಲ್ಲಿಂದ ಹೋಟಲಿಗೆ ಹೋದರು.

ಆನಂದನಿಗೆ ಎಲ್ಲವೂ ಬಹಳ ವಿಚಿತ್ರವಾಗಿ ತೋರಿತು. ಹೋಟಲು, ಮಾಣಿಗಳು, ಆ ಜನ, ಆ ಗಲಿಬಿಲಿಯೆಲ್ಲಾ ಯಾವುದೋ ಬೇರೆಯ ಪ್ರಪಂಚ—ವಿಚಿತ್ರ ಪ್ರಪಂಚದ್ದು ಎನಿಸಿತು. ಯಾವಾಗಲೂ ಆ ಖಾಕಿಬಟ್ಟೆ, ಕೊಳಕು ತಟ್ಟೆ, ಕಂದಿದ ಮುಖಗಳನ್ನೇ ಕಂಡಿದ್ದವನಿಗೆ ಇದೆಲ್ಲಾ ಹೊಸತಾಗಿ, ವಿಕಾರವಾಗಿ ಕಾಣಿಸಿತು, ಜೈಲಿನಿಂದ ಬಿಡುಗಡೆಯಾದಾಗ ಮನಸ್ಸು ಅರಳಿತ್ತು. ತಾನೂ ಬಹುಕಾಲ ಬಿಟ್ಟುಬಂದವರನ್ನು ಸೇರಬಹುದು. ಕಾಣದವರನ್ನು ಕಾಣಬಹುದೆಂಬ ಆಸೆ. ಹೊರಗೆ ಕಾಲಿಟ್ಟೊಡನೆಯೇ ದೀರ್ಘವಾಗಿ ದೊಡ್ಡದಾಗಿ ಗಾಳಿ ತೆಗೆದುಕೊಂಡಿದ್ದ. ಸೆರೆಮನೆಯ ಒಳಗೂ ಅದೇ ಗಾಳಿ. ಆದರೆ ಈಗೊಂದು ಹೊಸ ಮಾಧುರ್ಯ, ಹೊಸ ಹುರುಪು, ಹೊಸ ಚೇತನವಿತ್ತು ಆ ಗಾಳಿಯಲ್ಲಿ ಯಾವುದೋ ಒಂದು ಬಗೆಯ ಆಹ್ಲಾದ, ಉಲ್ಲಾಸ!

ಹೆಜ್ಜೆ ಹೆಜ್ಜೆಯಿಡುವಾಗಲೂ ಆನಂದ ಹಿಂತಿರುಗಿ ನೋಡುತ್ತಿದ್ದ. ತಾನು ನಿಜವಾಗಿಯೂ ಜೈಲಿನಿಂದ ಹೊರಗಿದ್ದೇನೆಂಬುದು ನಂಬಿಕೆಗೇ ಬಾರದು !

ಮನುಷ್ಯ ಒಂದು ವಾತಾವರಣದಲ್ಲಿದ್ದವನು ಇದ್ದಕ್ಕಿದ್ದಂತೆ ಹೊಸ ವಾತಾವರಣಕ್ಕೆ ಹೋದರೆ ಅವನ ಮನಸ್ಸಿನ್ನೂ ಹಳೆಯದರಲ್ಲೇ ಉಳಿದಿರುತ್ತದೆ. ಹೊಸದಕ್ಕಿನ್ನೂ ಹೃದಯ ಹೊಂದಿಕೊಂಡಿರುವುದಿಲ್ಲ. ಹಳೆಯ ಅಭ್ಯಾಸಗಳೇ ಹೊಸತರಲ್ಲಿಯೂ ತೋರಿಕೊಳ್ಳುವವು. ಆನಂದನಿಗೂ ಹಾಗೆಯೇ ಆಯಿತು. ಸೆರೆಮನೆಗೆ ಹೋದಾಗ ಹೊಂದಿಕೊಳ್ಳುವುದು ಕಷ್ಟವಾಗಿತ್ತು. ಈಗ ಸೆರೆಮನೆಯ ಅಭ್ಯಾಸವೇ ಬಲವಾಗಿ ಹೊರಗಿನ ನಡುವಳಿಕೆಗೆ ಹೊಂದಿಕೆ ಆಗಿರಲಿಲ್ಲ.

ಹೋಟೆಲಿನ ಗಡಿಯಾರ ಗಂಟೆ ಹೊಡೆದೊಡನೆಯೇ ಆನಂದ ಎದ್ದು ನಿಂತ.

" ಇದೇನೋ ? " ಎಂದ ರಾಮು ಗಾಬರಿಯಿಂದ.

" ಕಾಫಿಯ ಹೊತ್ತಾಯಿತು. ಹೋಗಬೇಡವೇ ? "

ಆನಂದ ಮರುಕ್ಷಣವೇ ತಾನಿರುವುದು ಜೈಲಿನಲ್ಲಿಲ್ಲ. ಹೊರಜಗತ್ತಿನಲ್ಲಿ ಎಂಬುದು ನೆನಪಾಗಿ ನಾಚಿಕೆಯಾಯಿತು.

" ಲಲಿತ, ಅಮ್ಮ ನೆಮ್ಮದಿಯಾಗಿದಾರೆ ತಾನೇ ? " ಎಂದ ಆನಂದ.

" ನಾನು ಅವರನ್ನು ಕಂಡು ಇಪ್ಪತ್ತು ದಿನವಾಯಿತು. ಎಲ್ಲಾ ಸೌಖ್ಯವಾಗಿದ್ದರು. ಅಮ್ಮ ಮಾತ್ರ ಬಹಳ ಕೊರಗಿ ಕೊರಗಿ ಅರ್ಧವಾಗಿ ಹೋಗಿದಾರೆ. "

" ಹೂಂ—ನಿನಗೆ ಪರೀಕ್ಷೆ ಯಾವಾಗ ? "

" ಮಾರ್ಚ ೨೦ನೆಯ ತಾರೀಕು. ನಿನ್ನ ಹುಟ್ಟಿದ ಹಬ್ಬದ ದಿನ.

" ಸರಿಯಾಗಿ ಓದಿಕೊಳ್ಳಪ್ಪ. ಇನ್ನೇನು ಇನ್ನು ಒಂದೇ ತಿಂಗಳು "

ಚಿರಕಾಲ ಅಗಲಿದ ಸ್ನೇಹಿತರು ಆಡಿಕೊಂಡ ಮಾತುಗಳನ್ನೆಲ್ಲಾ ಅಕ್ಷರಗಳಲ್ಲಿ ಅಳವಡಿಸುವುದು ಅಸಾಧ್ಯ ! ಆಗಹೋಗದ ಮಾತು !

× × × × ×

ಲಲಿತ ಊಟ ಮಾಡಿ ಕೊಂಚ ಹೊತ್ತು ವಿಶ್ರಮಿಸಿಕೊಳ್ಳೋಣವೆಂದು ಮಲಗಿಕೊಂಡಿದ್ದಳು. ಪಾರ್ವತಮ್ಮನವರೂ ಮತ್ತೊಂದು ಕಡೆ ಚಾಪೆ ಹಾಸಿಕೊಂಡು ನಿದ್ರೆ ಹೋಗಿದ್ದರು ಲಲಿತ ಆನಂದನನ್ನೇ ಜ್ಞಾಪಿಸಿಕೊಂಡು ಕಣ್ಣಿನಲ್ಲಿ ನೀರು ತಂದುಕೊಂಡಳು. ಇದ್ದಕ್ಕಿದ್ದಂತೆ ಪಾರ್ವತಮ್ಮನವರು "ಆನಂದ, ಆನಂದ" ಎಂದು ಕೂಗುತ್ತಾ ಎದ್ದು ಕುಳಿತರು. ಲಲಿತಾ ಗಾಬರಿಯಿಂದ ಎದ್ದು ಕುಳಿತು

"ಅಮ್ಮ, ಅಮ್ಮ" ಎಂದಳು.

"ಏನೂ ಇಲ್ಲ ಕಣೇ. ಮನಸ್ಸಿನ ಭ್ರಾಂತಿ!"

"ಏನಮ್ಮ?"

"ಆನಂದನಿಗೆ ಬಿಡುಗಡೆಯಾದ ಹಾಗೆ—ಅವನು ಬಂದ ಹಾಗೆ"

"ಒಳ್ಳೆಯ ಕನಸು"

"ಹೂಂ—ಕನಸೆಲ್ಲಾ ನಿಜವಾದರೆ! ಇನ್ನೆಷ್ಟು ದಿನಕ್ಕೋ ಆನಂದನಿಗೆ ಬಿಡುಗಡೆ?" ಪಾರ್ವತಮ್ಮನವರು ನಿಟ್ಟುಸಿರಿಟ್ಟರು.

"ಇಲ್ಲಮ್ಮ—ಜೇಗನೇ ಬಿಡುಗಡೆಯಾಗುತ್ತೆ" ಎಂದಳು ಲಲಿತ ಕಣ್ಣು ಒರೆಸಿಕೊಳ್ಳುತ್ತ.

ಗೋಡೆಯ ಮೇಲೊಂದು ಹಲ್ಲಿ ಮೂರು ಜಾರಿ ಲೊಚಗುಟ್ಟಿತು. ಪಾರ್ವತಮ್ಮನವರು "ಕೃಷ್ಣ, ಕೃಷ್ಣ, ಕೃಷ್ಣ" ಎಂದು ಕಾಫಿಗಿಡಲು ಅಡಿಗೆ ಮನೆಯೊಳಕ್ಕೆ ಹೋದರು. ಲಲಿತಳಿಗೂ ಬಹಳ ಬೇಸರ, ದುಃಖ!

"ಅಮ್ಮ, ಒಳ್ಳೆಯ ಸುದ್ದಿ ಏನಾದರೂ ಬರುತ್ತೆ. ಎಡಗಣ್ಣು ಅದರುತ್ತಿದೆ" ಎಂದಳು ಲಲಿತ.

ಪಾರ್ವತಮ್ಮನವರು ಒಳಗಿನಿಂದಲೇ ಕೊರಗಿನ ದನಿಯಲ್ಲೇ "ಏನು ಬರುತ್ತೋ? ಏನೋಮ್ಮ. ಎಲ್ಲಾ ಆ ರಾಮನ ಕೃಪೆ" ಎಂದರು.

ಲಲಿತ ಹಾಗೆಯೇ ಕೈಮೇಲೆ ತಲೆಯೂರಿಕೊಂಡು ಯೋಚಿಸುತ್ತಾ ಕುಳಿತಿದ್ದಳು.

"ಆನಂದ ಜೈಲಿಗೆ ಹೋಗಿ ಆಗಲೇ ಆರು ತಿಂಗಳಾಯಿತು. ಇನ್ನೆಷ್ಟು ದಿನ ಅಲ್ಲಿಯೇ ಕೊಳೆಯಬೇಕೋ? ಮತ್ತೆಂದು ನೋಡುವುದೋ! ಎಂದುಕೊಂಡಳು.

ಹಾಗೆಯೇ ಮೂಲೆಯಲ್ಲಿ ಬಿದ್ದಿದ್ದ ಆನಂದನ ಎಕ್ಕಡದ ಮೇಲೆ ಅವಳ ದೃಷ್ಟಿ ಬಿತ್ತು. ಕೂಡಲೇ ಅಂದು ಸಂಜೆಯ ನೆನಪಾಯಿತು. ಆ ದಿನ ಆನಂದ, ರಾಮು ಮತ್ತು ಲಲಿತ ಮೂವರೂ ಜತೆಯಲ್ಲಿ ಪೇಟೆಗೆ ಹೋಗಿದ್ದರು. ಆನಂದ ತಾನೊಂದು ಜತೆ ಹೊಸ ಚಪ್ಪಲಿ ಕೊಂಡುಕೊಂಡ ಬಲವಂತದಿಂದ ಅವಳಿಗೂ ಕೊಂಡುಕೊಟ್ಟಿದ್ದ. ಅದು ಆಗಸ್ಟ ಚಳುವಳಿ ಆರಂಭವಾಗುವುದಕ್ಕೆ ಮುನ್ನಾದಿನ! ಅಂದು ರಾತ್ರಿ ನರಸಿಂಹಯ್ಯ ಬಹಳ ರೇಗಿ 'ಹೆಂಗಸಿಗೇಕೆ ಎಕ್ಕಡ' ಎಂದು ಅವಳ ಜತೆಯನ್ನು ಕಿಟಕಿಯಿಂದ ಹೊರಕ್ಕೆಸೆದು ಬಿಟ್ಟಿದ್ಧರು. ಅದೆಲ್ಲಾ ನೆನಪಾಗಿ ಲಲಿತಳಿಗೆ ದುಃಖ ಮರುಕಳಿಸಿತು. ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಂತೆ ಬಾಗಿಲು ತಟ್ಟಿದ ಸದ್ದಾಯಿತು. ಶಾಲೆಯಿಂದ ಹುಡುಗರು ಬರುವ ಹೊತ್ತು ಎಂದುಕೊಂಡು ಮೆಲ್ಲನೆ ಸೆರಗಿನಿಂದ ಕಣ್ಣೊರಸಿಕೊಳ್ಳುತ್ತಾ ಎದ್ದು ಬಾಗಿಲು ತೆರೆದಳು.

"ತಂತಿ ಬಂದಿದೆ." ಏಂದ ಅಂಚೆ ಜವಾನ.

ಲಲಿತಳಿಗೆ ತಲೆ ತಿರುಗಿದಂತಾಯಿತು. ಕತ್ತಲು! ಶೂನ್ಯ! ಕೊಂಚ ಕೊಂಚವಾಗಿ ಚೇತರಿಸಿಕೊಂಡು ನಡುಗುವ ಕೈಗಳಿಂದ ತಂತಿಯನ್ನು ತೆಗೆದುಕೊಂಡು ಒಡೆದಳು. ಮುಖದಲ್ಲಿ ಒಸರಿದ ಬೆವರಿನಿಂದ ಹಣೆಯ ಕುಂಕುಮ ಅಳಿಸಿ ಮೂಗಿನ ಮೇಲೆಲ್ಲಾ ಇಳಿದಿತ್ತು.

"ಅಮ್ಮ" ಎಂದು ಚೀರಿ ಲಲಿತಾ ಒಳಕ್ಕೆ ಓಡಿ ಹೋದಳು.

ಪಾರ್ವತಮ್ಮನವರು ಕಾಫಿಪುಡಿಯನ್ನು ಹಾಕಲು ಡಬ್ಬದ ಮುಚ್ಚಳ ತೆಗೆದಿದ್ದರು. ಮಗಳ ಚೀರುವಿಕೆ ಕೇಳಿ ಅವರಿಗೆ ಎದೆಯೊಡೆದಂತಾಯಿತು. ಕೈಯಲ್ಲಿದ್ದ ಡಬ್ಬ ಕೆಳಕ್ಕೆ ಬಿದ್ದು ಪುಡಿಯೆಲ್ಲಾ ಚೆಲ್ಲಿ ಹೋಯಿತು.

"ಬಸುರಿ—ಇನ್ನೇನು ಗೃಹಚಾರವೋ" ಎಂದು ಎದೆ ಕುದಿಯುತ್ತಿತ್ತು.

ಲಲಿತಾ ಒಳಕ್ಕೆ ಓಡಿ ಬರುತ್ತಲೇ "ಏನೇ—ಏನು?" ಎಂದರು.

"ಅಮ್ಮ, ನಾಳೆ ಆನಂದ ಬರ್ತಾನೆ."

"ಏನೆಂದೆ?"

ಪಾರ್ವತಮ್ಮನವರಿಗೆ ಅವಳ ಮಾತಿನಲ್ಲಿ, ತಮ್ಮ ಕಿವಿಗಳಲ್ಲಿ ನಂಬಿಕೆಯೇ ಇಲ್ಲ.

"ಹೌದಮ್ಮ, ನಾಳೆ ಆನಂದ ಬರ್ತಾನೆ, ತಂತಿ ಕಳಿಸಿದಾನೆ" ಎಂದಳು ಲಲಿತ

ಪಾರ್ವತಮ್ಮನವರಿಗೆ ಹಿಡಿಸಲಾರದಷ್ಟು ಹಿಗ್ಗು! ಕಣ್ಣಿನಲ್ಲಿ ಒಂದೇ ಸಮನಾಗಿ ನೀರು ಹರಿಯುತ್ತಿತ್ತು. ಬಾಡಿದ ಆ ಮುಖದಲ್ಲೊಂದು ಕಳೆ ಕೂಡಿ ಬಂದಿತ್ತು.

ಲಲಿತಳಂತೂ ಎಳೆಯ ಮಗುವಿನಂತೆ ತಕಪಕ ಕುಣಿದು ಬಿಟ್ಟಳು ಹೊರಗೆ ಅಂಚೆ ಜವಾನ ನಿಂತಿದ್ದುದು ಈಗಾಗಲೇ ಮರೆತೇ ಹೋಗಿತ್ತು. ಹೊರಗಿನಿಂದ ಅವನು ಕೂಗಿದಾಗಲೇ ನೆನಪು!

"ಇಲ್ಲಿ ರುಜು ಮಾಡಿ ತಾಯಿ."

ಲಲಿತಾ ನಗುನಗುತ ರುಜು ಮಾಡಿದಳು.

"ತಾಳಪ್ಪಾ" ಎಂದು ಒಳಗೆ ಹೋಗಿ ಎಲೆಯಡಿಕೆ, ಕಲ್ಲುಸಕ್ಕರೆ ಮತ್ತು ಒಂದು ರೂಪಾಯಿ ತಂದುಕೊಟ್ಟಳು.

"ನನ್ನ ತಮ್ಮನಿಗೆ ಜೈಲಿನಿಂದ ಬಿಡುಗಡೆಯಾಯಿತಪ್ಪಾ" ಎಂದಳು.

"ಬಹಳ ಸಂತೋಷ ತಾಯಿ" ಎನ್ನುತ್ತ ಜವಾನ ಹೊರಟುಹೋದ.

"ಎಲ್ಲರಿಗೂ ಇಂತಹ ಒಳ್ಳೆಯ ಸುದ್ದಿಯೇ ಬರಬಾರದೇ!" ಎಂದು ಕೊಂಡು ಮನಸ್ಸಿನಲ್ಲೇ ಒಂದು ನಿಟ್ಟುಸಿರು ಬಿಟ್ಟ.

ಲಲಿತ ಒಳಕ್ಕೆ ಹೋಗುವ ವೇಳೆಗಾಗಲೇ ಪಾರ್ವತಮ್ಮನವರು ದೇವರಿಗೆ ತುಪ್ಪದ ದೀಪ ಹಚ್ಚಿ ಇಟ್ಟು ನಮಸ್ಕರಿಸುತ್ತಿದ್ದರು.

"ದೇವರು ದೊಡ್ಡವನಮ್ಮ" ಎನ್ನುತ್ತ ಲಲಿತ ತಾನೂ ನಮಸ್ಕರಿಸಿದಳು.

"ರಾಮನ ಪೂಜೆ ಮಾಡಿದ್ದಕ್ಕೂ ಸಾರ್ಥಕವಾಯಿತು. ಆನಂದನಿಗೆ ಬಿಡುಗಡೆಯಾಯಿತು. ರಾಮ ಕಣ್ಣು ಬಿಟ್ಟು ನೋಡಿದ." ಎಂದರು ಪಾರ್ವತಮ್ಮನವರು.

ಅವರ ಮಾತಿನಲ್ಲಿ ಭಕ್ತಿ ಆನಂದಗಳ ಪವಿತ್ರ ಮಿಲನವಿತ್ತು.

ಅಷ್ಟು ವೇಳೆಗೆ ಶಾಲೆಯಿಂದ ಮಕ್ಕಳು ಬಂದರು. ಎಂದಿನಂತೆಯೇ ಗಲಾಟೆ ಮಾಡಿಕೊಂಡು "ಅನ್ನ ಹಾಕು, ಕಾಫಿ ಕೊಡು" ಎಂದು ಅಜ್ಜಿಯ

ಬಳಿಗೆ ಓಡಿದರು. ಅಜ್ಜಿ ಎಂದಿನಂತೆ ಸಪ್ಪೆ ಮುಖದಿಂದಿರದೆ ನಗುನಗುತ್ತಿದ್ದರು. ಲಲಿತಳೂ ಅಷ್ಟೆ. ಯಾವಾಗಲೂ ಜೋಲು ಮುಖ ಹಾಕಿಕೊಂಡಿರುತ್ತಿದ್ದವರು. ಹಸನ್ಮುಖಿಯಾಗಿದ್ದಳು.

ಲಲಿತಾ ಹುಡುಗರನ್ನೆಲ್ಲ ಹತ್ತಿರ ಕರೆದು ಎಲ್ಲರಿಗೂ ಕಲ್ಲುಸಕ್ಕರೆ ಕೊಟ್ಟಳು.

"ನಾಳೆ ಮಾವ ಬರ್ತಾನೆ ಕಣೇ" ಎಂದು ವಿಮಲಳಿಗೆ ಮುತ್ತಿದ್ದಳು.

"ಅಮ್ಮ, ಮಾವ ಎಲ್ಲಿಗೆ ಹೋಗಿದ್ದನೇ?" ಎಂದಳು ೫ ವರ್ಷದ ವಿಮಲ.

"ಜೈಲಿಗೆ ಹೋಗಿದ್ದ ಕಣೇ—ಜೈಲಿನಿಂದ ಬಿಟ್ಟರೇನಮ್ಮ?" ಎಂದು ರ್ನಣಿ ಕೇಳಿದ.

ಜೈಲೂಂದ್ರೆ ಹೇಗಿರುತ್ತಮ್ಮ?"

"ಜೈಲು ಅದರೆ ಗೊತ್ತಿಲ್ಲವೇನೇ? ಅಯ್ಯೋ! ಅಷ್ಟೂ ಗೊತ್ತಿಲ್ಲ!" ಎಂದು ಎರಡನೆಯ ಮಗಳು ಸುಶೀಲಾ ಹಾಸ್ಯ ಮಾಡಿದಳು.

"ನೋಡಮ್ಮ—ಸುಶೀ ನನ್ನ ಹಾಸ್ಯ ಮಾಡ್ತಾಳೆ" ಎಂದು ವಿಮಲ ಅಳಲಾರಂಭಿಸಿದಳು.

"ಇದೆ ಕಣೇ, ಸುಮ್ಮನಿರೇ" ಎಂದು ಲಲಿತಾ ಅವಳನ್ನು ಸಮಾಧಾನಗೊಳಿಸಲು ಯತ್ನಿಸಿದಳು.

"ಹಾಗಾದ್ರೆ ನಿನಗೆ ಗೊತ್ತೇ ಜೈಲು?" ಎಂದು ವಿಮಲ ಸುಶೀಲಳಿಗೆ ಮರುಸವಾಲ್ ಹಾಕಿದಳು.

"ಓ! ನನಗೆ ಗೊತ್ತೇಗೊತ್ತು."

"ಹೇಳೇಮ್ಮ ಹಾಗಗಿದರೆ"

"ಉಹುಂ! ಹೇಳೋಲ್ಲ."

"ನೋಡಿದೆಯೇನೇ ಸುಶೀ—ನಾನು ನಿನಗೆ ಬಳಪ ಕೊಡ್ಲಿಲ್ವಾ?"

"ಇನ್ನೊಂದು ಬಳಪ ಕೊಡೋದಿದ್ರೆ—ಜೈಲಿನಲ್ಲಿ ಎಲ್ಲಾ ಊಟಾ ಮಾಡುತ್ತಾರೆ—ಆಟ ಆಡ್ತಾರೆ—ಅಲ್ಲಿ ತುಂಬಾ ಜನ ಇರ್ತಾರೆ. ಪೋಲೀಸಿನವರೂ ಕಳ್ಳರೂ ಇದಾರೆ. ಮಾವನೂ ಇದಾನೆ" ಎಂದಳು ಸುಶೀಲ.

"ಮಾಮನಿಗೆ ಪೋಲೀಸ್ನೋರ್ನ ಕಂಡರೆ ಹೆದರಿಕೆ ಆಗೋಲ್ವೇನಮ್ಮ?"

"ಇಲ್ಲ ಕಣೇ" ಎಂದಳು ಲಲಿತ.

"ಹಾಗಾದರೆ ದೊಡ್ಡವಳಾದ ಮೇಲೆ–ನಿನ್ನಷ್ಟು ದೊಡ್ಡವಳಾದ ಮೇಲೆ ಅಮ್ಮ, ನಾನೂ ಜೈಲಿಗೆ ಹೋಗ್ತೀನಿ. ಅಲ್ಲಿ ಸುಖವಾಗಿ ಮಾಮನ ಜತೇಲಿರ್ತೀನಿ. ಆಗ ನೀವ್ಯಾರೂ ಬೇಡ. ಅಮ್ಮ ನೀನು ನನ್ನನ್ನು ನೋಡೋದಕ್ಕೆ ಬರ್ತೀಯಾ—ಅಲ್ವೇನಮ್ಮ?" ಎಂದಳು ವಿಮಲ.

"ನಾನೂ ಬರ್ತೀನಿ" ಎಂದಳು ಸುಶೀಲ.

"ನಾನು—ನಾನು" ಎನ್ನುತ್ತ ನಾಗವಲ್ಲಿ ಅಳಲಾರಂಭಿಸಿದಳು.

ಲಲಿತಳಿಗೆ ಹಿಡಿಸಲಾರದಷ್ಟು ಹಿಗ್ಗು, ಸಂತೋಷ!

"ನಿಮಗೆಲ್ಲ ಮಧ್ಯಾಹ್ನ ರಜಾ! ಮನೆಯಲ್ಲಿ ಎಲ್ಲರೂ ಆಟವಾಡಿಕೊಂಡು ಇದ್ದು ಬಿಡಿ. ಶಾಲೆಗೆ ಹೋಗಬೇಡಿ" ಎಂದಳು.

ಹುಡುಗರಿಗೆ ಬೇಕಾಗಿದ್ದುದೂ ಅದೇ. ಎಲ್ಲರೂ ಸಂತೋಷದಿಂದ ಅಡಿಗೆ ಮನೆಯೊಳಕ್ಕೆ ಓಡಿದರು. ಪಾರ್ವತಮ್ಮನವರೂ ಕಾಫಿಗೆ ಒಂದಕ್ಕೆರಡು ಸಕ್ಕರೆ ಹಾಕಿ ಪಾನಕ ಮಾಡಿಟ್ಟಿದ್ದರು. ಹುಡುಗರಂತೂ ಖುಷಿಯಿಂದ ಅದನ್ನು ಹೀರಿದರು.

ಲಲಿತಳಿಗೆ ಮನಸ್ಸು ಬಹಳ ಚಂಚಲವಾಗಿತ್ತು. ಹಿಗ್ಗಿನಿಂದ ಏನು ಮಾಡಲೂ ತೋಚದು. ಚೆನ್ನಾಗಿ ಹೆಣೆದಿದ್ದ ಜಡೆಯನ್ನು ಬಿಚ್ಚಿಬಿಟ್ಟು ಮತ್ತೆ ಹೆಣೆದುಕೊಂಡಳು. ಕನ್ನಡಿಯ ಮುಂದೆ ನಿಂತು ಹತ್ತು ಬಾರಿ ಕುಂಕುಮವನ್ನಿಟ್ಟುಕೊಂಡಳು ವಿಮಲಳಿಗೆ ಮುಖದ ಮೇಲೆ ಅರ್ಧ ಅಂಗುಲ ತೋರುವಂತೆ ಪೌಡರ್ ಬಳಿದಳು, ಜಡೆ ಹೆಣೆದಳು. ಆದರೆ ಏನೇನು ಮಾಡಿದರೂ ಮನಸ್ಸಿಗೆ ಸಮಾಧಾನವಿಲ್ಲ. ಆನಂದನ ಕೋಣೆಯನ್ನೆಲ್ಲಾ ಗುಡಿಸಿ ಓರಣ ಮಾಡಿಟ್ಟಳು. ಪುಸ್ತಕಗಳನ್ನೆಲ್ಲ ಜೋಡಿಸಿಟ್ಟಳು. ಆದರೂ ತೃಪ್ತಿಯಿಲ್ಲ. ಎಲ್ಲಿ ನಿಂತರೂ ಸಾಲದು, ಕೂತರೂ ಸಾಗದು—ಮನಸ್ಸು ಕುಣಿದಾಡುತ್ತಿತ್ತು.

ರಾತ್ರಿ ನರಸಿಂಹಯ್ಯನವರು ಎಂದಿಗಿಂತಲೂ ಹೆಚ್ಚು ಕೋಪದಿಂದ ಮನೆಗೆ ಬಂದಿದ್ದರು. ಕಚೇರಿಯಲ್ಲೇನೋ ತಪ್ಪು ನಡೆದು ಬೈಸಿಕೊಂಡು ಅವಮಾನವಾಗಿದ್ದುದರಿಂದ ಕೋಪ ಬಹಳವಾಗಿತ್ತು. ಅದರಿಂದ ಊಟಕ್ಕೆ

ಕೂಡುವಾಗಲೇ ಘುಡುಘುಡಿಸುತ್ತಿದ್ದರು. ಮಕ್ಕಳು ಅವರಿಂದ ಕೊಂಚ ದೂರದಲ್ಲಿಯೇ ಕುಳಿತು ಮೌನವಾಗಿ ಊಟ ಮಾಡುತ್ತಿದ್ದರು.

ಇದ್ದಕ್ಕಿದ್ದಂತೆ ವಿಮಲ ನಾಣಿಯ ಕಡೆ ತಿರುಗಿ "ನಾಳೆ ನಾನು ಮಾಮನ ಜತೇಲಿ—ಮಾಮನ ಪಕ್ಕದಲ್ಲಿ" ಎಂದಳು.

"ನಿಮ್ಮ ಮಾಮ ಸತ್ತು ಹೋದ" ಎಂದು ಗರ್ಜಿಸಿದರು ನರಸಿಂಹಯ್ಯ.

"ನಾಳೆ ಮಾಮ ಬರ್ತಾನಂತೆ—ಅಮ್ಮ ಹೇಳಿದ್ಳು" ಎಂದಳು ವಿಮಲ.

"ಇಂತಹ ಪುಂಡರನ್ನು ಸೆರೆಮನೆಯಲ್ಲೇ ಕೊಳೆಹಾಕುವುದು ಬಿಟ್ಟು ಬಿಡುಗಡೆಯಂತೆ ಬಿಡುಗಡೆ. ಕಳ್ಳಕಾಕರ ಜತೆಯಲ್ಲಿ ಕೊಳೆಯಬೇಕು. ಆಗಲೇ ಅವರಿಗೆ ಬುದ್ಧಿ ಬರುವುದು'" ಎಂದು ಹಲ್ಲು ಕಚ್ಚಿ ಅಂದರು ನರಸಿಂಹಯ್ಯ.

"ಹಾಗಲ್ಲಾಂದರೆ—" ಲಲಿತ ಬಾಯಿ ಹಾಕಿದಳು.

"ಹಾಗೂ ಅಲ್ಲ—ಹೀಗೂ ಅಲ್ಲ. ಭ್ರಷ್ಟ! ಪೋಲಿ! ಮತ್ತೆ ನಮ್ಮ ಮನೆಗೆ ಕಾಲಿಟ್ಟರೆ ಕಾಲು ಮುರಿದು ಬಿಡುತ್ತೇನೆ."

ಲಲಿತ ಈ ಮಾತಿನಿಂದ ಸುಮ್ಮನಾದಳು. ಮುಂದೆ ಮಾತನಾಡಿದರೆ ಕೋಪ ಮತ್ತೂ ಹೆಚ್ಚಿ ಇನ್ನೂ ಏನೇನು ಅನರ್ಥವಾದೀತೋ ಎಂದು ಹೆದರಿಕೆ.

ಮಲಗುವ ಕೋಣೆಯೊಳಹೊಕ್ಕು ನರಸಿಂಹಯ್ಯ ಕೆಂಡವಾಗಿದ್ದರು. ಲಲಿತ ಕೋಣೆಯೊಳಗೆ ಬಂದೊಡನೆಯೇ ಅವರ ಕೆಂಡದ ನೋಟದಿಂದ ಅವಳು ನಡುಗಿ ತತ್ತರಿಸಿದಳು.

"ಸ್ಕೂಲಿಗೆ ಹೋಗಬೇಡವೆಂದಿಯೇನೇ ಹುಡುಗರನ್ನ?" ಎಂದರು ನರಸಿಂಹಯ್ಯ;

ಲಲಿತ ಉತ್ತರವನ್ನೇ ಕೊಡದೆ ಬಾಗಿಲು ಮುಚ್ಚಿ ಚಿಲಕ ಹಾಕಿದಳು.

"ಯಾಕೇ, ನಾಲಿಗೆ ಸೇದಿಹೋಯಿತೇನೇ?"

ಲಲಿತ ಮೌನವಾಗಿಯೇ ಹಾಸಿಗೆಯ ಕಡೆ ನಡೆದುಬಂದಳು.

"ಆ ಚಂಡಾಲನಿಗೆ ಬಿಡುಗಡೆಯಾಯಿತೆಂದೋ?"

ಲಲಿತ ಮಾತನ್ನೇ ಆಡದೆ ಹಾಸಿಗೆಯನ್ನು ಕೈಗೆತ್ತಿಕೊಂಡಳು. ನರಸಿಂಹಯ್ಯ ಉಗ್ರರೂಪಿಯಾಗಿ, ರೇಗಿನ ಪರಮಾವಧಿ ಮುಟ್ಟಿ ಅವಳ ರಟ್ಟೆ ಹಿಡಿದು ಜಗ್ಗಿದರು. ಆದರೂ ಲಲಿತಳ ಬಾಯಿಂದ ಒಂದೂ ಮಾತು ಹೊರಡ

ಲಿಲ್ಲ. ಮರುನಿಮಿಷವೇ ಅವರು ಕೈಬಿಟ್ಟ ರಭಸಕ್ಕೆ ಲಲಿತ ತತ್ತರಿಸಿದಳು ಕಣ್ಣಿಗೆ ಕಗ್ಗತ್ತಲು ಕವಿದಂತಾಗಿತ್ತು. ಕಾಲು ಕುಸಿಯಿತು. ಲಲಿತ ನೆಲದ ಮೇಲುರುಳಿದಳು. ಹಾಸಿಗೆ ಅವಳ ಮೇಲೆಬಿತ್ತು!

ರಾತ್ರಿಯೆಲ್ಲಾ ಒದ್ದಾಟ—ನಿದ್ರೆಯೇ ಬಾರದು. ರಟ್ಟೆ ಊದಿಕೊಂಡಿತ್ತು. ಹೊಟ್ಟೆನೋವು—ಹೊಟ್ಟೆಯನ್ನು ಕಿವುಚಿದಂತೆ, ಕಡೆದಂತೆ! ಬಹು ಹಿಂಸೆ ಯಾಯಿತು. ಸುಮ್ಮನೇ ಇತ್ತಿಂದತ್ತ ಹೊರಳಾಡುತ್ತಿದ್ದಳು. ಹಾಗೂ ಹೀಗೂ ಬೆಳಗಿನ ಜಾವದ ವೇಳೆಗೆ ಕೊಂಚ ಜೊಂಪು ಹಿಡಿದಂತಾಯಿತು. ಆದರೆ ಏನೇನೋ ಕನಸು—ಆನಂದ ಹಿಂತಿರುಗಿದಂತೆ—ತನ್ನ ಯಜಮಾನರು ಅವ ನನ್ನು ನೂಕಲು ಹೋದಂತೆ—ತಾನು ತಡೆಯಹೋದಂತೆ—ಆದಕ್ಕೆ ಅವರು ತನ್ನನ್ನು ಹೊರನೂಕಿದಂತೆ—ತಾನು ಬಚ್ಚಲಲ್ಲಿ ಬಿದ್ದಂತೆ!—ಲಲಿತ "ಅಯ್ಯೋ!" ಎಂದು ಚೀರುತ್ತ ಎಚ್ಚತ್ತಳು.

ಪಾರ್ವತಮ್ಮನವರು ಬೆಳಗ್ಗೆ ಬೇಗನೇ ಎದ್ದು ಉತ್ಸಾಹದಿಂದ ಓಡಾಡು ತ್ತಿದ್ದರು. ಮನೆಯಲ್ಲೆಲ್ಲವನ್ನೂ ಓರಣ ಮಾಡಿದ್ದರು ಮಡಿಯುಟ್ಟು ಕೊಳ್ಳಲೆಂದು ಬಚ್ಚಲು ಮನೆಗೆ ಹೋಗಿದ್ದವರು ಲಲಿತಳ ಚೀರಾಟ ಕೇಳಿ ಗಾಬರಿಯಿಂದ ಓಡಿಬಂದರು.

"ಆರು ತಿಂಗಳ ಗರ್ಭಿಣಿ. ಹೇಗೋ ಏನೋ— ಎಂದು ಅವರ ಯೋಚನೆ.

"ಯಾಕೇ, ಕೂಗಿಕೊಂಡೆ?"

"ಏನೂ ಇಲ್ಲಮ್ಮ. ಏನೋ ಕನಸು-ಅಷ್ಟೆ. ಆನಂದ ಯಾವಾಗಮ್ಮ ಬರ್ತಾನೆ?"

"ಈಗೇನೋ ಬರಲಿಲ್ಲ. ಹನ್ನೊಂದು ಗಂಟೆ ರೈಲಿಗೇ ಬರಬಹುದು"

"ಲಲಿತ ಬಹಳ ಕಷ್ಟದಿಂದ ಬಚ್ಚಲು ಮನೆಗೆ ಹೋಗಿ ಮುಖ ತೊಳೆದು ಕೊಂಡು ಬಂದಳು.

"ಇವತ್ತೇನಮ್ಮ ಅಡಿಗೆ?"

"ಏನು ಮಾಡೋದೋ—ನನಗೇನೂ ತೋಚೋದೇ ಇಲ್ಲ."

"ಮೂಲಂಗಿ ಮಜ್ಜಿಗೆಹುಳಿ ಮಾಡಿಬಿಡು. ಆಲೂಗೆಡ್ಡೆ ಇದ್ದರೆ ಪಲ್ಯ— ಮತ್ತೆ ನಿಂಬೆಹುಳಿಯನ್ನ ಇಷ್ಟು ಮಾಡಿಬಿಡು ಸಾಕು. ಆನಂದನಿಗೆ ಆಲೂ ಗೆಡ್ಡೆ ಪಲ್ಯ ಬಹಳ ಇಷ್ಟ." ಎಂದಳು ಲಲಿತಾ.

"ಹೌದು, ಹೌದು" ಎನ್ನುತ್ತಾ ರಾಮುವೂ ಆನಂದನೂ ಒಳಕ್ಕೆ ಬಂದರು.

ಲಲಿತಾ ತಟ್ಟನೆ ಹಿಂತಿರುಗಿದಳು. ಆನಂದನನ್ನು ಕಂಡೊಡನೆ ಬೆಚ್ಚಿ ಬಿದ್ದಳು. ಅವನನ್ನು ಗುರುತಿಸುವುದೇ ಪ್ರಯಾಸವಾಗಿತ್ತು. ಆನಂದನೋ ಇಲ್ಲ ಅವನ ಪ್ರೇತವೋ ಎನ್ನುವಂತಾಗಿ ಹೋಗಿದ್ದ. ಲಲಿತಳ ಬಾಯಿಂದ ಮಾತೇ ಹೊರಡಲ್ಲ. ಪಾರ್ವತಮ್ಮನವರಿಗೂ ಅವನನ್ನು ನೋಡಿ ಒಂದು ಬಗೆಯ ಹೆದರಿಕೆಯೇ ಆಯಿತು. ಹಂಚೀ ಕಡ್ಡಿಯಂತಾಗಿ ಹೋಗಿದ್ದ ಆನಂದ!

"ಎಷ್ಟೊಂದು ಇಳಿದು ಹೋಗಿದ್ದೀಯೋ—ಆಗ ನೋಡಿದಾಗ ಮೈಕೆ ತುಂಬಿಕೊಂಡಿತ್ತು—ಈಗ—" ಎಂದರು ಪಾರ್ವತಮ್ಮನವರು.

"ಜೈಲಿನಲ್ಲಿ ಬಹಳ ಕಷ್ಟವಾಗಿತ್ತೋ ಏನೋ?" ಎಂದಳು ಲಲಿತ.

ಆನಂದನಿಗೆ ಅವಳೊಡನೆ ಮಾತಾಡಲು ಬಾಯೇ ಬಾರದು. ಏನೋ ಸಂಕೋಚ. ತನ್ನಿಂದ ಅವರಿಗೆ ಎಷ್ಟೊಂದು ತೊಂದರೆ, ಎಷ್ಟೊಂದು ಹಿಂಸೆ, ನೋವು! ಎಂದು ನಾಚಿಕೆ. ಹೇಗೋ ಅಂತೂ ಕೊನೆಗೊಮ್ಮೆ ಅವರ ಬಳಿಗೇ ಬಂದು ಸೇರಿ ಎಲ್ಲರೂ ಕೂಡಿದೆವಲ್ಲಾ ಎಂಬ ಹಿಗ್ಗು—ಇದೆಲ್ಲಾ ಸೇರಿ ಅವ ನನ್ನು ಮಾತನಾಡಲು ಬಿಡಲೇ ಇಲ್ಲ. ನಾಲಿಗೆಯೇ ಹೊರಳಲಿಲ್ಲ!

"ನಿಮ್ಮ ಕೈ ಅನ್ನ ನೀರು ಬಿದ್ದರೆ ಸಾಕು. ನಾಲ್ಕು ದಿನಗಳಲ್ಲೇ ಗೂಳಿಯ ಹಾಗಾಗುತ್ತಾನೆ" ಎಂದ ರಾಮು.

ಎಲ್ಲರೂ ಅವನ ಮಾತಿಗೆ ನಕ್ಕರು. ಆನಂದನೊಂದಿಗೆ ಆ ಮನೆಗೆ ನಗೆ ಆನಂದಗಳು ಮತ್ತೆ ಬಂದಿದ್ದವು

ಲಲಿತಳ ಸಡಗರವೇ ಸಡಗರ! ರಾತ್ರಿಯ ನೋವೆಲ್ಲಾ ಆಗ ಕಡಿಮೆ ಯಾಗಿತ್ತು. ಸರಿಗೆಯ ಸೀರೆ ಜರತಾರಿಯ ರವಿಕೆ ತೊಟ್ಟು ಅಲ್ಲಿಂದಿಲ್ಲಿಗೆ ಸುಮ್ಮನೆ ಓಡಾಡುತ್ತಿದ್ದಳು. ಒಂದು ನಿಮಿಷವಾಗಲೀ ಒಂದೇ ಕಡೆ ನಿಲ್ಲದೆ ಚಿಟ್ಟೆಯಂತಾಡುತ್ತಿದ್ದಳು. ಆನಂದನ ಕೊಠಡಿಯಲ್ಲಿದ್ದ ಜೇಡನಸರೆಯನ್ನೆಲ್ಲಾ

ತೆಗೆದು ಶುಚಿಗೊಳಿಸಿ ಪುಸ್ತಕಗಳನ್ನೆಲ್ಲಾ ಸರಿಯಾಗಿ ಜೋಡಿಸಿದಳು, ಆದರೆ ಹೇಗೆ ಜೋಡಿಸಿದರೂ ಮನಸ್ಸಿಗೊಪ್ಪದು. ಮತ್ತೆ ಮತ್ತೆ ಬೇರೆ ರೀತಿಯಲ್ಲಿ ಇಡುತ್ತಿದ್ದಳು. ಆದರೆ ಏನು ಮಾಡಿದರೂ ಮನಸ್ಸಿನ ಸುಖ– ಉಲ್ಲಾಸದ ಪ್ರವಾಹಕ್ಕೆ ತೃಪ್ತಿಯಿಲ್ಲ !

ಪಾರ್ವತಮ್ಮನವರು ಎಲ್ಲರಿಗೂ ಕಾಫಿ ಮಾಡಿಕೊಟ್ಟು ಅಡಿಗೆಗೆ ಕುಳಿತರು ಆದರೆ ಮನಸ್ಸು ಒಂದೇ ಕಡೆ ನಿಲ್ಲಬೇಕಲ್ಲ! ಅದೆಷ್ಟು ಬಾರಿ ದೇವರಿಗೆ ನಮಸ್ಕಾರ ಹಾಕಿದರೋ! ಅದೆಷ್ಟು ಬಾರಿ ಆರಿಹೋದ ಒಲೆಯನ್ನು ಹೊತ್ತಿಸಿದರೋ! ಮರೆವಿನಲ್ಲಿ ಸಾರಿಗೆ ಹಾಕುವ ಅರಿಶಿನ ಅನ್ನಕ್ಕೆ ಬಿದ್ದು ಅನ್ನವೆಲ್ಲಾ ಅರಿಶಿನವಾಗಿತ್ತು. ಜಪವಂತೂ ಮಾಡಿದುದನ್ನೇ ಮತ್ತೆ ಮತ್ತೆ ಮಾಡಿ ಮುಗಿಯಲೇ ಒಲ್ಲದು !

ಊಟ ಮುಗಿಸಿಕೊಂಡು ಕೊಂಚ ಹೊತ್ತು ನಿದ್ರೆಮಾಡಿ ಆನಂದನೂ ರಾಮುವೂ ಹೊರಗೆ ಹೊರಟರು ಆದರೆ ಪಾರ್ವತಮ್ಮನವರಿಗೆ ಅದು ಇಷ್ಟವಿಲ್ಲ.

"ಸ್ವಲ್ಪ ಸುಧಾರಿಸಿಕೊಳ್ಳೋ, ಆಯಾಸವಾಗಿದೆ" ಎಂದರು.

"ಸ್ವಲ್ಪ ಸುತ್ತಿಕೊಂಡು ಬಂದರೆ ವೈಗೊಳ್ಳೆಯದಮ್ಮ, ಗಾಬರಿಪಡಬೇಡ. ಇನ್ನು ಮೇಲೆ ಯಾವಾಗಲೂ ನಿನ್ನ ಜತೆಯಲ್ಲೇ ಇರುತ್ತಾನೆ" ಎಂದಳು ಲಲಿತ ನಗುತ್ತಾ.

ಆನಂದನೂ ರಾಮುವೂ ಯಾವುಯಾವುದೋ ವಿಚಾರವಾಗಿ ಹರಟೆ ಹೊಡೆಯುತ್ತಿದ್ದರು. ಅವರಿವರ ಓದುಗಾರಿಕೆ—ಅಧ್ಯಾಪಕರ ದಬ್ಬಾಳಿಕೆ—ಹೀಗೆಯೇ ತೋಚಿತೋಚಿದ ವಿಚಾರ!

ರಾಮುವಿಗೆ ಆನಂದನ ಮನಸ್ಸಿನ ಒಳಗನ್ನು ಪೂರ್ಣವಾಗಿ ತಿಳಿಯುವ ಇಚ್ಛೆ. ಅನುವಿನ ವಿಚಾರವಾಗಿ ಆನಂದನ ಪತ್ರದಿಂದಲೇ ಅವನು ಸಾಕಷ್ಟು ಊಹಿಸಿದ್ದ ಆದರೆ ಆನಂದನಿಂದಲೇ ಅವನ ಮನಸ್ಸಿನ ಆಗುಹೋಗುಗಳನ್ನು ತಿಳಿಯುವ ಕುತೂಹಲ! ಆದರೆ ತಾನಾಗಿಯೇ ಕೆಣಕಲು ಅವನಿಗೆ ಮನಸ್ಸಿರಲಿಲ್ಲ

ಚಾಮುಂಡಿ ಬೆಟ್ಟದ ಮೇಲೆ ಒಂದೆಡೆ ಚೆನ್ನಾಗಿ ಬಿದ್ದಿದ್ದ ಬಿಸಿಲಿನಲ್ಲಿ ಹಸುರು ಹೊಳೆಯುತ್ತಿತ್ತು. ಪಕ್ಕದಲ್ಲಿ ಮೋಡದ ನೆರಳು ಬಿದ್ದು ಎಲ್ಲವೂ

ನೀಲಿಯಾಗಿ ಕಾಣುತ್ತಿತ್ತು. ಆನಂದ ಆ ಕಡೆ ನೋಡುತ್ತಿದ್ದ. ನೆರಳು ಮುಂದೆ ಮುಂದೆ ಸರಿದು ಬಿಸಿಲಿದ್ದ ಸ್ಥಳವನ್ನಾಕ್ರಮಿಸಿಕೊಂಡಿತ್ತು.

"ಮನುಷ್ಯನ ಬಾಳೂ ಆ ಬೆಟ್ಟದಂತಲ್ಲವೇ ರಾಮು, ಒಂದೆಡೆ ಬಿಸಿಲು, ಒಂದೆಡೆ ನೆರಳು" ಎಂದ ಆನಂದ.

"ಈಗ ಬಿಸಿಲಿದ್ದ ಕಡೆ ನಾಳೆ ನೆರಳು, ನೆರಳಿದ್ದ ಕಡೆ ಬಿಸಿಲು. ಆದರೆ ಇದಾವುದನ್ನೂ ಲೆಕ್ಕಿಸದೆ ಸೂರ್ಯ ಮಾತ್ರ ತನ್ನಷ್ಟಕ್ಕೆ ತಾನು ಆಕಾಶದಲ್ಲಿ ನಡೆಯುತ್ತಾನೆ" ಎಂದ ರಾಮು ಮ್ಲಾನವದನನಾಗಿ.

ರಾತ್ರಿ ಊಟಮಾಡಲು ಕುಳಿತಾಗ ಆ ಮಾತು ಈ ಮಾತಿನಲ್ಲಿ ಹಳೆಯ ದಿನಗಳ ಮಾತು ಬಂತು.

"ಜಗತ್ತನ್ನು ದೂಷಿಸುತ್ತಿದ್ದ ಕಾಲ ಈಗಿಲ್ಲ, ಅಕ್ಕ. ಈಗ ಪ್ರೀತಿಯ ಕಾಲ." ಎಂದ ಆನಂದ.

"ಆಗ ನಮ್ಮ ಮೇಲೆಲ್ಲಾ ಉರಿದುಬೀಳುತ್ತಿದ್ದೆ!" ಎಂದಳು ಲಲಿತ.

"ನೀನೇನೆಂದುಕೊಳ್ಳುತ್ತಿದ್ದೆ ಅಕ್ಕ?"

"ಏನೋ ಹುಡುಗ–ಕಷ್ಟಪಟ್ಟವನು–ವಿಶ್ವಾಸ ತೋರಿದರೆ ತಾನಾಗಿಯೇ ಸರಿಹೋಗುತ್ತಾನೆ ಎಂದುಕೊಳ್ಳುತ್ತಿದ್ದೆ."

"ನಾನು ಆಗ ತಿಳಿದಿದ್ದಂತೆ ಜೀವನ ಕಷ್ಟದ ಕಡಲಲ್ಲ" ಎಂದ ಆನಂದ.

"ಅದು ಸುಖದ ಸಮುದ್ರವೂ ಅಲ್ಲ" ಎಂದ ರಾಮು.

ಲಲಿತ ಕೊಂಚ ಹೊತ್ತು ಸುಮ್ಮನಿದ್ದು ಮೆಲ್ಲನೆ ಮೃದುವಾಗಿ "ಜೀವನ ಹೇಗೆಂದು ನಮಗೆ ಹೇಳುವ ಹಕ್ಕೇ ಇಲ್ಲ" ಎಂದಳು.

"ಜೀವನ ಅಗಾಧ, ನಮ್ಮ ಬದುಕು ಚಿಕ್ಕದು. ಜೀವನವನ್ನು ನಾವು ಅಳೆಯುವುದು ಒಂದು ಲೋಟದಿಂದ ಸಾಗರವನ್ನು ಅಳೆಯುವಂತೆ! ಜೀವನ ಸುಖದ ಸಮುದ್ರವೇ ಆಗಿರಲಿ, ಕಷ್ಟದ ಕಡಲೇ ಆಗಿರಲಿ ನಾವಂತೂ ಜೀವಂತ ರಾಗಿದ್ದೇವೆ. ಅನುಭವಿಸಲೇ ಬೇಕು" ಎಂದುಕೊಂಡಳು, ಮನಸ್ಸಿನಲ್ಲೇ ಕಣ್ಣಿನಲ್ಲಿ ಹನಿಯಾಡಿತು.

ಎಲ್ಲರೂ ಮೌನವಾಗಿಯೇ ಊಟ ಮುಗಿಸಿ ಎದ್ದರು.

## ೧೨

ರಾಮು ಮರುದಿನ ಬೆಳಗಿನ ರೈಲಿನಲ್ಲೇ ಬೆಂಗಳೂರಿಗೆ ಹಿಂತಿರುಗಿದ. ಆನಂದನಿಗೆ ಅವನೊಂದಿಗೆ ಏನೇನೋ ಹೇಳಬೇಕೆಂದು ಮನಸ್ಸು ಎಷ್ಟೋ ಬಾರಿ ಬಾಯಿಗೂ ಬಂದಿತ್ತು. ಆದರೆ ಏನೋ ಸಂಕೋಚ. ಅದರಿಂದ ಆನಂದ ಹೇಳಲು ಹಿಂದೆಗೆಯುತ್ತಿದ್ದ. ರಾಮುವಿಗೂ ಅವನನ್ನು ಕೇಳುವ ಕುತೂಹಲ. ಆದರೆ ತಾನಾಗಿಯೇ ಆ ವಿಚಾರವನ್ನು ಕೆಣಕುವುದು ಸರಿಯಲ್ಲವೆಂದು ಸುಮ್ಮನಿದ್ದ. ಹೀಗಾಗಿ ಆನಂದನ ಹೃದಯದ ಮಾತು ಹೃದಯದಲ್ಲಿಯೇ ಉಳಿಯಿತು. ರಾಮು ತನ್ನ ಮನಸ್ಸಿನ ಕುತೂಹಲವನ್ನು ಹಾಗೆಯೇ ಹೊತ್ತು ಬೆಂಗಳೂರಿಗೆ ಹೋಗಬೇಕಾಯಿತು.

ಆನಂದನ ಮನಸ್ಸಿನಲ್ಲಿ ತಳಮಳ! ಒದ್ದಾಟ! ಏನೋ ಒಂದು ಬಗೆಯ ಆಸೆ—ಕುತೂಹಲ—ಕಾತರ! ಕಾಲೇಜಿನ ಕಡೆಗೆ ಒಂದು ಬಾರಿ ಹೋಗಿ ಅನಸೂಯಳನ್ನು ನೋಡಿಕೊಂಡು ಬರುವ ಆಸೆ! ಆದರೆ ಅನು ಇನ್ನೂ ಕಾಲೇಜಿನಲ್ಲಿರುವಳೇ, ಇಲ್ಲ ಬಿಟ್ಟಿರುವಳೇ ಎಂದು ತಿಳಿಯದು. ಅವಳು ಕಾಲೇಜು ಬಿಟ್ಟಿರಲಾರಳೆಂದು ಅವನ ಮನಸ್ಸು ಹೇಳುತ್ತಿತ್ತು. ಅನುವಿನ ವಿಚಾರವಾಗಿ ಚಿಂತಿಸಬಾರದೆಂದುಕೊಂಡ ಹಾಗೆಲ್ಲಾ ಚಿಂತೆ ಹೆಚ್ಚಾಗುತ್ತಾ ಬಂತು. ಒಂದಲ್ಲ ನೂರು ಬಗೆಯ ಚಿಂತೆ. "ಅನು ಈಗ ಹೇಗಿರುವಳೋ ಏನೋ? ನನ್ನ ಮೇಲೆ ಕೋಪಗೊಂಡಿರುವಳೋ ಏನೋ? ನನ್ನನ್ನು ಕ್ಷಮಿಸಿರುವಳೋ ಇಲ್ಲವೋ? ಅನುವನ್ನು ಒಂದು ಬಾರಿಯಾದರೂ ನೋಡಿ ಬರಬೇಕಲ್ಲವೇ? ಅವಳು ಮತ್ತೇನಾದರೂ ಅಂದುಕೊಂಡರೆ—" ಹೀಗೆಯೇ ನೂರು ಬಗೆಯ ಸಮಸ್ಯೆ. ಎಷ್ಟೆಷ್ಟು ಪ್ರಯತ್ನಿಸಿದರೂ ಅವಳನ್ನು ಮರೆಯಲಾಗದು. ಅನುವಿನ ಆಕೃತಿ—ಚಿತ್ರ ಮನಸ್ಸಿನ ತೆರೆಯ ಮೇಲೆ ಒಂದೇ ಸವನಾಗಿ ಮೂಡಿ ಕುಣಿಯುತ್ತಿತ್ತು.

ಮತ್ತೇನೂ ಬೇಡ! ಒಂದು ಬಾರಿಯಾದರೂ ಅನುವನ್ನು ನೋಡಿ ಬಂದರೂ ಸಾಕು ಎಂದು ಎದೆ ತಹತಹಿಸುತ್ತಿತ್ತು. ಛೇ! ನಾನು ಆಕೆಯನ್ನು ನೋಡಲು ಇಷ್ಟೇಕೆ ತವಕಪಡಬೇಕು! ನನಗೂ ಆಕೆಗೂ ಯಾವ ಸಂಬಂಧ! ಅನುವಿನಿಂದ ನನಗೇನಾಗಬೇಕು? ಅವಳಿಗಾಗಿ ನಾನೇಕೆ ಇಷ್ಟು

ಕಾತರಿಸಬೇಕು. ಎಂದು ಮನಸ್ಸನ್ನು ಬಿಗಿ ಹಿಡಿಯಲು ಯತ್ನಿಸುತ್ತಿದ್ದ. ಅನುವನ್ನು ನೋಡಲು ತಾನು ತವಕಪಡುವುದೊಂದು ಅಸಭ್ಯತನವೆಂದು ತನ್ನನ್ನು ತಾನು ಛೀಮಾರಿ ಹಾಕಿಕೊಂಡ. ಆದರೆ ಮನಸ್ಸು ಮಾತ್ರ ಆ ಮಾತನ್ನೊಪ್ಪದು. ಬೋನಿನಲ್ಲಿ ಸಿಕ್ಕಿದ ಸಿಂಹದಂತೆ ತನ್ನನ್ನು ತಾನೇ ಪರಚಿಕೊಳ್ಳುತ್ತಿತ್ತು. ಇಷ್ಟಾದರೂ ಈ ಆಸೆ— ಈ ಕಳವಳ—ಈ ಕಾತರ ಏಕೆ, ಏತರಿಂದ! ತನಗೇಕೆ ಹಾಗೆ ಎನ್ನಿಸಿದೆಯೆಂದು ಅವನಿಗೇ ಅರ್ಥವಾಗದು. ಎಷ್ಟು ಯೋಚಿಸಿದರೂ ಬಗೆಹರಿಯದು.

ರಾತ್ರಿಯೆಲ್ಲಾ ಒದ್ದಾಟ. ಹೇಗೆ ಹೇಗೆ ಮಲಗಿದರೂ ನಿದ್ರೆ ಬಾರದು. ಕಣ್ಣು ತೆರೆದು ಕತ್ತಲಲ್ಲಿ ಏನೋ ಚಿತ್ರ ರಚಿಸಿಕೊಳ್ಳುತ್ತಿದ್ದ. ಆ ಕತ್ತಲಿನಲ್ಲಿ ನೂರು ಬೆಳಕು—ನೂರು ಬಣ್ಣದ ಚಿತ್ರ—ನೂರು ಆಕೃತಿ ಮಿಂಚಿದಂತಾಗುತ್ತಿತ್ತು. ಹಲವಾರು ರೂಪಗಳು ಒಮ್ಮೆಗೇ ಮಿಂಚುತ್ತಿದ್ದುವು. ಮೆಲ್ಲನೆ ಎಲ್ಲವೂ ಕರಗಿ ಕತ್ತಲಿನಲ್ಲಿ ಮಾಯವಾಗುತ್ತಿದ್ದವು. ಉಳಿದುದು ಬರಿಯ ಕತ್ತಲೆ! ಕಣ್ಣು ಇದುವರೆಗೂ ಕಂಡುದನ್ನೆಲ್ಲಾ ಮತ್ತೆ ಕಾಣಬಯಸುತ್ತಿತ್ತು.

ಕೊನೆಗೆ ಬಹಳ ಹೊತ್ತು ನಿದ್ರೆಯಿಲ್ಲದೇ ಹಾಸಿಗೆಯಮೇಲೆ ಹೊರಳಿದವನು ಆನಂದ ಎದ್ದು ದೀಪ ಹಚ್ಚಿದ. ಎದುರಿಗಿದ್ದ ಪುಸ್ತಕದ ಮಾಡಿನಿಂದ ಒಂದು ಪುಸ್ತಕವನ್ನೆಳೆದುಕೊಂಡು ಬಿಚ್ಚಿದ. ಅದು Thomas Hardy (ಥಾಮಸ್ ಹಾರ್ಡಿ)ಯ ಕವಿತೆಗಳ ಪುಸ್ತಕ. ಆನಂದ ಬಿಚ್ಚಿದ ಕಡೆ ಒಂದು ಪದ್ಯ—

"Let not the tablet of my heart
Bear the name of woman"
[ನನ್ನೆದೆಯ ಹಲಗೆಯಲಿ ಹೆಣ್ಣು ಹೆಸರದು ಬೇಡ]

ಮನಸ್ಸು ಎಲ್ಲೆಯೋ ಹಾರಿತು. ಲಂಗಿಲ್ಲದ ಕುದುರೆಯಂತೆ ಎಲ್ಲಿಯೋ ಓಡಲಾರಂಭಿಸಿತು. ಪುಸ್ತಕದ ಮೇಲೆ ಸ್ಥಿರದೃಷ್ಟಿಯಿಡಲು ಸಾಧ್ಯವೇ ಆಗದು. ಕೊನೆಗೆ ಹೊರಗೆ ಹೋಗಿ ಸುತ್ತಿಕೊಂಡು ಬಂದರಾದರೂ ನಿದ್ರೆ ಬಂದೀತೆಂದು ಹೊರಗೆ ಹೊರಟ.

ಮಾಘಶಶಿ ಮೆಲ್ಲಮೆಲ್ಲನೆ ಆಕಾಶದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಾಯುತ್ತಿದ್ದ. ಮೈಸೂರಿನ ಬೀದಿಗಳಲ್ಲೆಲ್ಲಾ ಚಂದ್ರನ ಬೆಳ್ಳಿಯ

ಕಿರಣಗಳು ಹಾಯಾಗಿ ನಿದ್ರೆ ಹೋಗಿದ್ದವು. ಕೆಂಪು ಹಂಚುಗಳನ್ನು ಬಿಳಿಯ ಕಿರಣಗಳು ಹಗಲಿನ ಬೆಳಕು ಉದಯದ ಕೆಂಪು ಅಂಚನ್ನು ತಬ್ಬಿಕೊಂಡಂತೆ ಬಿಡಲಾರದೇ ಅಪ್ಪಿಕೊಂಡಿದ್ದುವು. ಎಲ್ಲ ಕಡೆಗೂ ನೀರವತೆ–ಮೌನ–ಶಾಂತಿ! ತೆಂಗಿನ ಮರದ ಉದ್ದವಾದ ಗರಿಗಳು ಮೆಲ್ಲನೆ ಬೀಸುತ್ತಿದ್ದ ಗಾಳಿಯಲ್ಲಿ ತೂರಾಡುತ್ತಿದ್ದವು ಅವುಗಳ ಸರಸರ ಶಬ್ದ ಯಾವುದೋ ಕನಸಿನ ಜಗತ್ತಿನ ಸಂಗೀತದ ಸವಿನೆರಳಿನಂತೆ ತೋರುತ್ತಿತ್ತು. ಗಾಳಿಯ ತಂಪು ವೈತಾಗಿ ಆನಂದ ತುಸು ಆಹ್ಲಾದಗೊಂಡ. ದೀರ್ಘವಾಗಿ ಉಸಿರೆಳೆಯುತ್ತಾ ಕತ್ತೆತ್ತಿದ. ಆಕಾಶದಲ್ಲಿ ಒಂದು ಪಕ್ಕಕ್ಕೆ ಒಂದು ಮೋಡ–ಬೆಳ್ಳಿಯಂಚಿನ ಕಪ್ಪು ಮೋಡ ಬಿನ್ನಾಣದಿಂದ ತೇಲುತ್ತಿತ್ತು. ಆನಂದನ ಮನಸ್ಸು ಮತ್ತೆಲ್ಲಿಗೋ ಹಾರಿತು. ಬೆಳ್ಳಿಯಂಚಿನ ಮೋಡದ ಮರೆಯಿಂದ ಬೆಡಗು ಬಿನ್ನಾಣಗಳ ಹುಡುಗಿ— ಅನುವಿನ ನಗೆ ಮುಖ ಅವನ ಕಡೆಗೆ ದಿಟ್ಟಿಸುತ್ತಿತ್ತು. ಆ ನಗೆ ಮುಖದ ಹೊಳಪಿನ ಹಾಯಿದೋಣಿಯಲ್ಲಿ ಆನಂದ ಕನಸಿನ ಜಗತ್ತಿಗೆ ಹಾದುಹೋದ. ಕಲ್ಪನೆಯಲ್ಲಿ ಆ ಮೋಡವನ್ನರಸಿಕೊಂಡು ಅನುವಿನ ಹಿಂದೆಯೇ ಓಡಿದ; ಅಲೆದಾಡಿದ. ತಂಗಾಳಿ ಅವನ ತಲೆಗೂದಲನ್ನು ಬಾಡಿದ ಮುಖದ ಮೇಲೆ ತಂದು ಕುಣಿಸುತ್ತಿತ್ತು. ಗುಳಿಬಿದ್ದ ಕಣ್ಣುಗಳು ಬೆಳುದಿಂಗಳಲ್ಲಿ ಹೊಸಕಾಂತಿ ಬೀರಿದುವು, ಮನಸ್ಸು ಕಲ್ಪನೆಯ ಕನಸಿನ ತೊಟ್ಟಿಲಲ್ಲಿ ತೂಗುತ್ತಿತ್ತು. ತೆಂಗಿನ ಮರಗಳ ಸರಸರ ಶಬ್ದದ ಮಧುರ ಸಂಗೀತ ಜೋಗುಳ ಹಾಡುತ್ತಿತ್ತು. ದೇಹ ಮಾತ್ರ ಕಾವಿನಲ್ಲಿ ಕೆಂಡವಾಗಿ ಉಳಿದಲ್ಲಿಯೇ ಉಳಿದಿತ್ತು!

ಮೋಡ ಚಂದ್ರನನ್ನು ಮರೆಮಾಡಿದಾಗಲೇ ಆನಂದನಿಗೆ ಎಚ್ಚರ—ತಿಳಿವು. ದೀರ್ಘವಾದ ನಿಟ್ಟುಸಿರೊಂದನ್ನಿಟ್ಟು ಮನೆಯ ಕಡೆಗೆ ಹಿಂದಿರುಗಿದ. ಹಾಗೂ ಹೀಗೂ ತಾರಾಡುತ್ತಿದ್ದ ಮನಸ್ಸು ಒಂದು ಶಾಂತಸ್ಥಿತಿಗೆ ಬಂದಿತ್ತು. ಮರುದಿನ ಅನುವನ್ನು ನೋಡಿಯೇ ಬಿಡುವೆನೆಂಬ ಸಂಕಲ್ಪ ಮನಸ್ಸಿನಲ್ಲಿ ಮೂಡಿದ್ದುದರಿಂದ ಮಲಗಿದ ಸ್ವಲ್ಪ ಹೊತ್ತಿಗೇ ನಿದ್ರೆ ಬಂದಿತು. ಕೊಂಚ ಕೊಂಚವಾಗಿ ನಿದ್ರೆ ಅವನನ್ನು ಆವರಿಸಿದಂತೆ ನಡುರಾತ್ರಿಯ ಗೂಬೆಯ 'ಗೂ ಗೂ' ವಿನ ಕರ್ಕಶತೆ ಅವನಿಗೆ ಮಸಕುಮಸಕಾಗಿ ಕೇಳಿ ಕೊಂಚ ಕೊಂಚವಾಗಿ ಮಾಸಿ ಹೋಯಿತು

ಹಗಲು ಉಲ್ಲಾಸಪೂರಿತವಾಗಿತ್ತು. ಮೋಡಗಳು ಆಕಾಶದಲ್ಲಿ ಕಮಲಗಳಂತೆ ಅರಳಿದ್ದುವು ಆನಂದ ಹಾಸಿಗೆಯ ಮೇಲೆಯೇ ಮಲಗಿಕೊಂಡ

ಹೊರಗಡೆಗೆ ದಿಟ್ಟಿಸುತ್ತಿದ್ದ. ಎದುರುಮನೆಯ ತೆಂಗಿನ ಮರದ ಹಸರು ಗರಿಗಳು ಎಳೆಬಿಸಿಲಿನಲ್ಲಿ ಹೊಳೆಯುತ್ತಿದ್ದುವು. ತೂರಾಡುತ್ತಿದ್ದ ಗರಿಯೊಂದರ ಮೇಲೆ ಹಕ್ಕಿಯೊಂದು ಕುಳಿತು ಹಾರಿಹೋದ ತನ್ನ ಗೆಳತಿಗಾಗಿ ಕೂಗುತ್ತಿತ್ತು. ನೀಲಾಕಾಶದಲ್ಲಿ ಬಿಳಿಯ ಮೋಡಗಳೂ ಕಪ್ಪು ಮೋಡಗಳೂ ಒಂದನ್ನೊಂದು ಅಟ್ಟಿಸಿಕೊಂಡು ಹೋಗುತ್ತಿದ್ದುವು. ಎಲ್ಲಿಂದಲೋ ಮಧುರಗೀತವೊಂದು ತೇಲಿತೇಲಿಯಾಗಿ ಬಂದು ಹೃದಯ ಹೊಕ್ಕಂತಾಗಿ ಆನಂದ ಮೈಮರೆತ! ಕಣ್ಣಿನ ರೆಪ್ಪೆ ಮುಚ್ಚಿತು. ಅನುವಿನ ರೂಪ ಕುಣಿಯಿತು.

ಆನಂದ ಕಾಫಿ ಕುಡಿಯುತ್ತಾ ಕುಳಿತಿದ್ದಾಗ ಯಾರೋ ಬಂದು ಹೊರಗಡೆ ಅವನನ್ನು ಕೂಗಿದರು. ಆನಂದ ಎದ್ದು ಹೋಗಿ ಅವರನ್ನು ತನ್ನ ಕೋಣೆಯಲ್ಲಿ ಕೂರಿಸಿದ. ಅವನ ಬಿಡುಗಡೆಯ ಸುದ್ದಿ ಕೇಳಿ ನೋಡಿಕೊಂಡು ಹೋಗೋಣವೆಂದು ಅವನ ಸ್ನೇಹಿತರು ಬಂದಿದ್ದರು. ಅವರಲ್ಲಿ ಆನಂದನ ಸಹಪಾಠಿಯೂ ಒಬ್ಬ—ಅನುವಿನ ಸಹಪಾಠಿ ರಾಜುವೂ ಅವನ ಜತೆಗೆ ಬಂದಿದ್ದ. ಅವರಿಗೆ ಆನಂದನನ್ನು ನೋಡಲು ಒಂದು ಬಗೆಯ ಸಂಕೋಚ ಹಿಂದೇಟು. ಅವನು ಜೈಲಿನಲ್ಲಿದ್ದಾಗ ತಾವು ಕಾಲೇಜಿಗೆ ಹೋಗುತ್ತಿದ್ದೆವಲ್ಲಾ ಎಂಬ ಕಳವಳ. ಮೊದಲಿನಿಂದ ಕೊನೆಯವರೆಗೂ ತಲೆ ತಗ್ಗಿಸಿಯೇ ಮಾತನಾಡುತ್ತಿದ್ದರು. ಆನಂದನಿಗೂ ಮನಸ್ಸು ಒಂದು ಬಗೆಯಾಯಿತು ತಾನು ಕಾಲೇಜಿಗೆ ಹೋಗುತ್ತಿದ್ದುದೆಲ್ಲಾ . ನೆನಪಾಗಿ ಮುಖ ವಿವರ್ಣವಾಯಿತು. ಎಲ್ಲರೂ ಕೊಂಚಕಾಲ ಮೌನವಾಗಿಯೇ ಕುಳಿತಿದ್ದರು. ಯಾರ ಬಾಯಿಂದಲೂ ಮಾತೇ ಹೊರಡದು.

ಲಲಿತಾ ಕಾಫಿ ತಂದುಕೊಟ್ಟಳು. ಕಾಫಿ ಕುಡಿಯಲಾರಂಭಿಸಿ ಆನಂದನೇ ಮಾತನಾಡಲಾರಂಭಿಸಿದ.

" ಕಾಲೇಜು ಹೇಗಿದೆ ? " ಎಂದ ಆನಂದ ತನ್ನ ಸಹಪಾಠಿಯ ಕಡೆಗೆ ತಿರುಗಿ.

" ಹೂಂ. ಇದೆ ! ಮೊದಲಿನಂತೆಯೇ ಬೇಸರದ ಬಾಳು. ಕುಂಟುತ್ತ ಮುಗ್ಗರಿಸುತ್ತ ನಡೆಯುತ್ತಿದೆ " ಎಂದ ಆನಂದನ ಸಹಪಾಠಿ.

" ನೀವು ಬಹಳ ತೆಗೆದುಹೋಗಿದ್ದೀರಿ. " ಎಂದ ರಾಜು—ಅನುವಿನ ಸಹಪಾಠಿ

" ಏನೂ ಅಂತಹುದಿಲ್ಲ. ಕೊಂಚ ಸ್ವೈ ಚೆನ್ನಾಗಿರಲಿಲ್ಲ—ಅಷ್ಟೇ ! ''
ಎಂದ ಆನಂದ.

" ಗುರುತು ಹಿಡಿಯುವುದೇ ಕಷ್ಟ, '' ಎಂದ ರಾಜು.

" ನಿಮಗೆ ಪರೀಕ್ಷೆ ಯಾವಾಗ ? "

" ಮಾರ್ಚ ೨೦ಕ್ಕೆ '' ಎಂದ ಆನಂದನ ಸಹಪಾಠಿ.

" ನಮಗೆ ೧೫ಕ್ಕೆ ಆರಂಭ; ೧೯ಕ್ಕೆ ಕೊನೆ " ಎಂದ ರಾಜು.

" ಹೂಂ—ವರ್ಷಾಂತ್ಯದ ಪರೀಕ್ಷೆ ತಾನೇ ! ಇನ್ನೇನು ಇಪ್ಪತ್ತು ದಿನ ಅಷ್ಟೇ. ಎಲ್ಲರೂ ಚೆನ್ನಾಗಿ ಓದಿಕೊಂಡಿರಬೇಕು " ಎಂದ ಆನಂದ.

ಆನಂದನ ಈ " ಎಲ್ಲರೂ '' ವಿನಲ್ಲಿ " ಅನು " ಇರುವಳೆಂಬುದು ರಾಜುವಿಗೆ ತಿಳಿಯುವುದಾದರೂ ಹೇಗೆ ? ಹೇಗಾದರೂ ಸರಿ. ಅನುವಿನ ವಿಷಯ ತಿಳಿಯಬೇಕೆಂದು ಆನಂದನ ಮನಸ್ಸು ತಹತಹ ಪಡುತ್ತಿತ್ತು. ಆದರೆ ಬಾಯಿಬಿಟ್ಟು ಕೇಳುವಂತಿಲ್ಲ. ಕೇಳಿದರೆ ಅವರೇನೆಂದುಕೊಂಡಾರು ಆ ಮೇಲೆ!

'' ಏನೋ ಸುಮಾರಾಗಿ ಓದಿಕೊಂಡಿದ್ದೇವೆ. " ಎಂದ ರಾಜು.

" ಈಗ ನಿಮ್ಮ ತರಗತಿಯಲ್ಲಿ ಎಷ್ಟು ಜನ ? " ಎಂದ ಆನಂದ.

ಯಾರು ಯಾರು ಬಿಟ್ಟು ಹೋಗಿರುವರೆಂಬುದು ಅವನಿಗೆ ಬೇಕಾಗಿರಲಿಲ್ಲ ಅನು ಇರುವಳೋ ಇಲ್ಲವೋ, ಅವಳು ಕಾಲೇಜು ಬಿಟ್ಟುಬಿಟ್ಟಳೋ—ಎಂದು ಅವನ ಶಂಕೆ—ಅಷ್ಟೇ ಅವನ ಆಸಕ್ತಿ !

" ಒಬ್ಬರು ಮಾತ್ರ ಕಡಿಮೆ " ಎಂದ ರಾಜು.

ಆನಂದನ ಹೃದಯದ ಬಡಿತ ಇದ್ದಕ್ಕಿದ್ದಂತೆ ಜೋರಾಯಿತು. ರಕ್ತ ತಲೆಗೆ ನುಗ್ಗಿ ಧುಮ್ಮಿಕ್ಕಲಾರಂಭಿಸಿತು. ಅನುವೇನಾದರೂ ಬಿಟ್ಟುಬಿಟ್ಟಳೋ—ಇಲ್ಲ! ಆಕೆ ಬಿಟ್ಟಿರಲಾರಳೆಂಬ ಸಮಾಧಾನ ! ಈ ಇಕ್ಕಟ್ಟಿನಲ್ಲಿ ತುಸುಕಾಲ ಮೈಮರೆತು ತಲೆ ಗಿರ್ರನೆ ಸುತ್ತಿತು. ಹಾಗೂ ಹೀಗೂ ಉದ್ವೇಗವನ್ನು ತಡೆದುಕೊಂಡ.

'' ಯಾರು ಬಿಟ್ಟವರು ? " ಎಂದು ಕೇಳಿದ.

" ಆ ಮದ್ರಾಸಿನ ಹುಡುಗ—ನಾರಾಯಣನ್ "

" ಯಾರೋ ನನಗೆ ಸರಿಯಾಗಿ ನೆನಪಿಲ್ಲ " ಎಂದ ಆನಂದ.

ಆವನು ಬಿಟ್ಟ ಸಮಾಧಾನದ ನಿಟ್ಟುಸಿರು ಅವನ ಸ್ನೇಹಿತರಿಗೆ ಕೇಳಿಸಲಿಲ್ಲ!

"ಅರೆ ಆ ಕೇಟು ಫ್ಲಾಸಿಯಲ್ಲಿ ಕಿರುಚುತ್ತಿದ್ದನಲ್ಲ—ಕೋಳಿಯ ಪುಕ್ಕದ ಜುಟ್ಟಿನವನು" ಎಂದು ರಾಜು ನಕ್ಕ.

ಅವನ ಉಪಾಧ್ಯಾಯರೊಬ್ಬರು ಹಾಗೆಯೇ ಇದ್ದುದರಿಂದ ಆವನ ನಗೆ ಕೊಂಚ ಜೋರಾಗಿಯೇ ಇತ್ತು.

"ನೀವು ಮತ್ತೆ ಕಾಲೇಜು ಸೇರುವಿರಾ?" ಎಂದ ರಾಜು.

ಆನಂದ ಕೊಂಚ ಕಾಲ ಮೌನವಾಗಿದ್ದ. ಆ ವಿಚಾರ ಇದುವರೆಗೂ ಅವನ ತಲೆಯಲ್ಲಿ ಸುಳಿದಿರಲಿಲ್ಲ; ಅವನಿನ್ನೂ ಆ ವಿಚಾರ ಯೋಚಿಸಿರಲಿಲ್ಲ.

"ನೋಡಬೇಕು, ಇನ್ನೂ ನಾಲ್ಕು ತಿಂಗಳಿದೆಯಲ್ಲ!"

ಗೆಳೆಯರಿಬ್ಬರೂ ಆವನು ಕಾಲೇಜು ಸೇರುವುದೇ ವಾಸಿಯೆಂದು ತಮ್ಮ ಅಭಿಪ್ರಾಯ ತಿಳಿಸಿದರು. ಹತ್ತು–ಹದಿನೈದು ನಿಮಿಷ ಹರಟೆ ಹೊಡೆಯುತ್ತಿದ್ದು, ನಂತರ ಇಬ್ಬರೂ ಹೊರಟುಹೋದರು.

ಊಟಕ್ಕೆ ಕುಳಿತಾಗ ಪಾರ್ವತಮ್ಮನವರು ಆನಂದ ಮತ್ತೆ ಕಾಲೇಜು ಸೇರುವ ಪ್ರಸ್ತಾಪವನ್ನೆತ್ತಿದರು. ಈ ವರ್ಷವಂತೂ ಹೋಯಿತು. ಹೋದರೂ ಚಿಂತೆಯಿಲ್ಲ. ಮುಂದೆ ಇನ್ನೆರಡು ವರ್ಷವಾದರೂ ಓದಿ ಮುಗಿಸೆಂದು ಒತ್ತಾಯ ಮಾಡಿದರು. ಲಲಿತ ಕೂಡ ಅದೇ ಹೇಳಿದಳು. ನಾಲ್ಕು ತಿಂಗಳು ಹೇಗಿದ್ದರೂ ರಜೆಯಿದೆ. ವಿಶ್ರಾಂತಿ ತೆಗೆದುಕೊಂಡಂತಾಗುತ್ತದೆ ಆ ಮೇಲೆ ಕಾಲೇಜಿಗೆ ಸೇರಿಕೊಂಡರೆ ಪರವಾಗಿಲ್ಲ. ಅಷ್ಟು ಹೊತ್ತಿಗೆ ಚೆನ್ನಾಗಿ ಒಂದಿಷ್ಟು ಆರೈಕೆ ಮಾಡಿಕೊಂಡು ಮೈಕೈ ತುಂಬಿಕೊಂಡಿರುತ್ತದೆ ಎಂದು ಅವರಿಬ್ಬರ ಸಲಹೆ. ಈಗ ಆ ವಿಷಯ ಚರ್ಚೆ ಮಾಡಬಾರದೆಂದು ಆನಂದ ಯಾವ ಮಾತನ್ನೂ ಆಡದೆ ಸುಮ್ಮನಿದ್ದುಬಿಟ್ಟ.

ಊಟ ಮಾಡಿದೊಡನೆಯೇ ಆನಂದನ ಮನಸ್ಸು ಕಾಲೇಜಿನ ಕಡೆ ಸೆಳೆಯುತ್ತಿತ್ತು. ಹಿಂದಿನ ರಾತ್ರಿಯೇನೋ ಕಾಲೇಜಿಗೆ ಹೋಗಿ ಆಕೆಯನ್ನು ನೋಡಿಬರುವುದೆಂದು ತೀರ್ಮಾನ ಮಾಡಿಕೊಂಡಿದ್ದ. ಆದರೆ ಈಗೇಕೋ ಮನಸ್ಸು ಹಿಂದೇಟು ಹಾಕುತ್ತಿತ್ತು. ಇದೇ ತಿಕ್ಕಾಟ ಮನಸ್ಸಿನಲ್ಲಿ! ಮಧ್ಯಾಹ್ನವೆಲ್ಲಾ ಒದ್ದಾಡಿದ. ಒಂದೆರಡು ಬಾರಿ ಮನಸ್ಸಿನ ದುರ್ಬಲ ನಿಮಿಷಗಳಲ್ಲಿ

ಹೊರಟು ಅಷ್ಟು ದೂರ ಕೂಡ ಹೋಗಿದ್ದ. ಆದರೆ ಅಷ್ಟರಲ್ಲೇ ಮನಸು ಬದಲಾಯಿಸಿ ಹಿಂತಿರುಗಿದ. ಹೇಗಾದರೂ ಈ ತಿಕ್ಕಾಟದಿಂದ ತಪ್ಪಿಸಿಕೊಳ್ಳ ಬೇಕೆಂದು ಲಲಿತಳ ಜತೆಯಲ್ಲಿ ಚದುರಂಗವಾಡಲು ಕುಳಿತ.

ಮೊದಲು ಮೊದಲಿನಲ್ಲಿ ಆಟದಲ್ಲಿ ಮನಸ್ಸಿಡಲು ಆಗುತ್ತಲೇ ಇರಲಿಲ್ಲ. ಹೇಗೆ ಹೇಗೋ ಆಡುತ್ತಿದ್ದ. ಆದರೆ ಕೊಂಚ ಹೊತ್ತಿನಲ್ಲಿಯೇ ಆಟದಲ್ಲಿ ಪೂರ್ಣ ಮಗ್ನನಾದ. ಇಬ್ಬರೂ ಚಿಕ್ಕಂದಿನಿಂದ ಕಲಿತು ಆಡಿದವರು; ನುರಿತ ಆಟಗಾರರು. ಆಟದ ಕಾವು ಇಬ್ಬರಿಗೂ ಏರಿತು. ಯಾರೂ ಸೋಲು ವಂತೆಯೂ ಇರಲಿಲ್ಲ; ಯಾರೂ ಗೆಲ್ಲುವಂತೆಯೂ ಇರಲಿಲ್ಲ. ಇಬ್ಬರೂ ಬಹಳ ಎಚ್ಚರದಿಂದ ಗುಣಾಕಾರ ಮಾಡಿ ಲೆಕ್ಕಹಾಕಿ ಆಡುತ್ತಿದ್ದರು

"ಈ ಆಟದಲ್ಲಿ ನಾನು ಗೆದ್ದರೆ ಗಂಡು, ಸೋತರೆ ಹೆಣ್ಣು" ಎಂದು ಕೊಂಡಳು ಲಲಿತ ಮನಸ್ಸಿನಲ್ಲಿಯೇ.

ಜೀವನದ ಚದುರಂಗದಾಟದಲ್ಲಿ ಸೋಲು–ಗೆಲುವುಗಳಿಗಾಗಿ ಕಾದು ಕುಳಿತವರೆಷ್ಟು ಮಂದಿ! ಗೆಲುವು ಸೋಲುಗಳಿಗಾಗಿ ಹೆಣಗಾಡುವರು. ಆದರೆ. ಎಷ್ಟು ಮಂದಿಯ ಆಟ ಸೋಲು ಗೆಲುವುಗಳ ಆಕಾಂಕ್ಷೆಯಲ್ಲೇ ಮೊಟಕಾಗು ವುದಿಲ್ಲ! ಕೊನೆಗೂ ಮೊದಲೇ ಎಷ್ಟೋ ಆಟ ಕೊನೆಗಾಣುವುದಿಲ್ಲವೇ? ತಾನು ಯಾವ ಸೋಲುಗೆಲುವುಗಳನ್ನಿಟ್ಟುಕೊಂಡಿದ್ದಳೋ— ಆದಾಗದೆ ಮೊದಲೇ ತನ್ನ ಆಟ ಮುಗಿಯುವುದೆಂದು ಲಲಿತಳಿಗೆ ಗೊತ್ತಿದ್ದರೆ–ಎಲ್ಲರಿಗೂ ತಮ್ಮ ಭವಿಷ್ಯ ತಿಳಿದಿದ್ದರೆ!

ಆಟ ಅರ್ಧದಲ್ಲಿ ಬಹಳ ಸ್ವಾರಸ್ಯದಲ್ಲಿದ್ದಾಗಲೇ ನಾಗವಲ್ಲಿ ಎದ್ದಳು. ಅದೇ ತಾನೇ ನಿದ್ರೆಯಿಂದೆದ್ದುದರಿಂದ ಅಳಲಾರಂಭಿಸಿದಳು. ಆಟದಲ್ಲಿಯೇ ಮಗ್ನ ಳಾಗಿದ್ದ ಲಲಿತ ಮೊದಲು ಅವಳನ್ನು ಗಮನಿಸಲಿಲ್ಲ. ನಾಗುವಿನ ಅಳು ಜೋರಾದ ಮೇಲೆ ಅವಳನ್ನೆತ್ತಿಕೊಂಡು ಬಂದು ತನ್ನ ಪಕ್ಕದಲ್ಲಿ ಕೂರಿಸಿ ಕೊಂಡಳು. ಅವಳನ್ನು ಸಮಾಧಾನ ಪಡಿಸಲು ಇಬ್ಬರ್ಪತ್ತ ಕಾಯಿಗಳನೂ ಕೊಟ್ಟಳು. ಆದರೆ ನಾಗು ಅಷ್ಟು ಸುಲಭವಾಗಿ ಸಮಾಧಾನಗೊಳ್ಳುವಂತಿರಲಿಲ್ಲ ಇನ್ನೂ ಕಾಯಿ ಬೇಕು ಎಂದು ಹಟಮಾಡಲಾರಂಭಿಸಿದಳು. ರೊಚ್ಚಿಯೆದ್ದಳು. ಆನಂದನೂ ಲಲಿತಳೂ ಎಷ್ಟು ಸಮಾಧಾನ ಮಾಡಿದರೂ ಸಮಾಧಾನ ಗೊಳ್ಳಲಿಲ್ಲ. ಕೊನೆಗೆ ಕೋಪದಿಂದ ತನ್ನ ಕೈಗಳಲ್ಲಿದ್ದ ಕಾಯನ್ನೆಲ್ಲ ದೋರ್ಡಿನ

ಮೇಲೆ ಎಸೆದುಬಿಟ್ಟಳು. ಬೋರ್ಡಿನ ಮೇಲಿದ್ದ ಕಾಯಿಗಳೆಲ್ಲಾ ಚೆಲ್ಲಾಪಿಲ್ಲಿಯಾಗಿ ಆಟ ಅರ್ಧಕ್ಕೇ ಕೊನೆಯಾಯಿತು.

ಲಲಿತ ಆನಂದ ಇಬ್ಬರೂ ಸಂಜೆ ಸಿನಿಮಾ ನೋಡಿಕೊಂಡು ಬರಲು ಹೊರಟರು. ಮೊದಲು ಮೊದಲು ಲಲಿತ ಹೆದರಿದಳು; ನರಸಿಂಹಯ್ಯ ಏನೆಂದಾರೋ ಎಂದ. ಆದರೆ ಆನಂದ ಮರುದಿನವೇ ಹಳ್ಳಿಗೆ ಹೊರಟುಹೋಗುತ್ತಿದ್ದ. ಮತ್ತೆ ಅವನ ಹುಟ್ಟಿದ ಹಬ್ಬದವರೆಗೂ ಮೈಸೂರಿಗೆ ಬರುತ್ತಿರಲಿಲ್ಲ. ಹೇಗಾದರೂ ಸರಿ. ಇವತ್ತು ಅವನ ಜತೆಯಲ್ಲಿ ಹೊರಟುಹೋಗೋಣವೆಂದುಕೊಂಡು ಹೊರಟಳು. ಇದೂ ಅಲ್ಲದೆ ಆನಂದ ತಾನಾಗಿಯೇ ಇಷ್ಟಪಟ್ಟಿದ್ದು. ಅವನ ಮನಸ್ಸನ್ನು ಈ ಸ್ಥಿತಿಯಲ್ಲಿ ನೋಯಿಸಬಾರದೆಂದು ಅವಳ ಯೋಚನೆ!

ಆನಂದ ಲಲಿತಳಿಗೆ ತನ್ನ ಜೇಲಿನ ಅನುಭವಗಳನ್ನು ಒಂದೊಂದನ್ನಾಗಿ ವರ್ಣಿಸುತ್ತಿದ್ದ. ಲಲಿತ ಪಕ್ಕದಲ್ಲಿ ಮೆಲ್ಲನೆ ನಡೆಯುತ್ತ ಕೇಳುತ್ತ ಹೂಂಗುಟ್ಟುತ್ತಿದ್ದಳು.

"ಅಲ್ಲಿ ನಾವೆಲ್ಲರೂ ಸುಖವಾಗಿಯೇ ಇದ್ದೆವು ಊಟ ತಿಂಡಿಗಳಿಗೇನೂ ತೊಂದರೆಯಿರಲಿಲ್ಲ ಕೆಲವು ದಿನ ಮಾತ್ರ ಕೊಂಚ ಹಿಂಸೆಯಾಯಿತು. ಅಷ್ಟೆ" ಎಂದ.

"ನಮ್ಮೆಲ್ಲರ ನೆನಪೂ ನಿನಗೆ ಆಗುತ್ತಿತ್ತೊ ಇಲ್ಲ–ನಮ್ಮನ್ನು ಮರೆತು ಬಿಟ್ಟಿದ್ದೆಯೊ?" ಎಂದಳು ಲಲಿತ.

"ಮರೆಯುವುದು ಹೇಗಕ್ಕ? ನಿಮ್ಮೆಲ್ಲರ ನೆನಪೂ ಆಗಾಗ ಬರುತ್ತಿತ್ತು. ನೀನು, ಅಮ್ಮ, ರಾಮು ಮತ್ತೆ ಮತ್ತೆ" ಆನಂದ ಇದ್ದಕ್ಕಿದ್ದಂತೆ—ಮೌನವಾದ. ಮಾತು ಮುಂದುವರಿಯುತ್ತದೆಂದು ಲಲಿತ—"ಹೂಂ" ಎಂದಳು. ಇಬ್ಬರೂ ತಿರುವಿನಲ್ಲಿ ತಿರುಗಿದರು. ಆನಂದನಿಗೆ ಯಾರದೋ ಕೈ ತಾಕಿತು. ತಿರುವಿನಲ್ಲಿ ನೋಡದೆ ಈ ಕಡೆಯಿಂದ ಅವನು, ಆ ಕಡೆಯಿಂದ ಮತ್ತಾರೋ ಅವಸರವಾಗಿ ಬಂದಿದ್ದರು. ಆದರೆ ಆನಂದನಿಗೆ ತಾಕಿದ ಕೈ ಎಷ್ಟು ಮೃದುವಾಗಿತ್ತು! ಕಣ್ಣೆತ್ತಿ ನೋಡಿದೊಡನೆಯೇ ಮೈಯೆಲ್ಲೆಲ್ಲಾ ವಿದ್ಯುತ್ಸಂಚಾರವಾದಂತಾಯಿತು

ಅನುವೂ ಆನಂದನ ಕಡೆಗೆ ನೋಡಿದಳು. ಕೂಡಲೇ ನಾಚಿಕೆಯಿಂದ ಮುಖಕ್ಕೆ ರಕ್ತವೇರಿತು ಸಂಜೆಸೂರ್ಯನ ಕೆಂಪೂ ಕೆನ್ನೆಯಮೇಲೆ ಬಿತ್ತು. ಅವಳು ಉಟ್ಟ ಸೀರೆ—ನೀಲಿಯದು. ಸೆರಗು ಸ್ವಲ್ಪ ಸರಿದು ಕಂಚುಕದ

ಹೊಂಬಣ್ಣದ ಸರಿಗೆ ಹೊರಗಿಣಿಕಿ ಸಂಜೆಯ ಕಿರಣಗಳಲ್ಲಿ ಹೊಳೆಯುತ್ತಿತ್ತು. ಆನಂದನ ಮೈ ಬೆವರಿತು. ಬಾಯಿಂದ ಮಾತೇ ಹೊರಡದು. ಹಾಗೂ ಹೀಗೂ ಪ್ರಯಾಸದಿಂದ "ಕ್ಷಮಿಸಿ" ಎಂದ. ಮುಖದಲ್ಲಿ ಉಕ್ಕಿದ ಬೆವರನ್ನೊರೆಸಿ ಕೊಳ್ಳುವಷ್ಟು ಕೂಡ ಸಾಕಷ್ಟು ಮೈ ತಿಳಿವಿರಲಿಲ್ಲ!

ಲಲಿತ ಆನಂದನೊಡನೆ ಮಾತನಾಡಲು ಯತ್ನಿಸಿದಳು. ಆದರೆ ಆನಂದ ಮಾತನಾಡುವುದನ್ನೇ ನಿಲ್ಲಿಸಿ ಬಿಟ್ಟ. ಏನಾದರೂ ಕೇಳಿದರೆ "ಅಂ" ಎನ್ನು ತ್ತಿದ್ದ. ಯಾವುದಕ್ಕೂ ಸರಿಯಾಗಿ ಉತ್ತರ ಕೊಡುತ್ತಿರಲಿಲ್ಲ. ಸುಮ್ಮನೆ ಹೂಂಗುಟ್ಟುತ್ತಿದ್ದ ಇದೇಕೆಂಬುದೇ ಲಲಿತಳಿಗೆ ಅರ್ಥವಾಗಲೊಲ್ಲದು. ಸಿನಿಮಾಕ್ಕೆ ಟಿಕೇಟು ಕೊಂಡು ತಂದವನು ಚಿಲ್ಲರೆ ತರುವುದನ್ನೇ ಮರೆತು ಬಂದಿದ್ದ!

ಆನಂದನಿಗೆ ಚಿತ್ರದಲ್ಲಿ ಆಸಕ್ತಿಯೇ ಇರಲಿಲ್ಲ. ಒಂದೇ ಸಮನಾಗಿ ಅವಳ ಯೋಚನೆ! ಅನುವನ್ನು ಕಾಣಬೇಕು.–ಕಾಣಬೇಕೆಂದು ಎದೆ ಇದು ತನಕ ಕಾತರಿಸಿತ್ತು. ಅದಕ್ಕಾಗಿ ಕಾಲೇಜಿಗೆ ಹೋಗಬೇಕೆಂದುಕೊಂಡಿದ್ದ. ಆದರೆ ಮನಸ್ಸಿಗೆ ಬಲು ಕಷ್ಟದಿಂದ ಕಡಿವಾಣ ಹಾಕಲು ಯತ್ನಿಸಿದ್ದ. ಆದರೆ ಈಗ ಅನು ತಾನಾಗಿಯೇ ಸಿಕ್ಕಿದ್ದಳು. ಅವಳನ್ನು ನೋಡಲು ಕಾಲೇಜಿಗೆ ಹೋಗುವ ಅವಶ್ಯಕತೆಯಿನ್ನಿರಲಿಲ್ಲ. ಆಕೆಯನ್ನು ಕಂಡುದಾಗಿತ್ತು. ಆದರೆ ಅದರಿಂದ ಮನಸ್ಸಿಗೆ ಸಮಾಧಾನವಾಗುವ ಬದಲು ಹೃದಯ ಕಲಕಿ ಹೋಯಿತು. ಕಡಿವಾಣಕಿತ್ತುಹೋದ ಕುದುರೆಯಂತೆ ಕಂಡಕಂಡಂತೆ ಕುಣಿ ಯಲಾರಂಭಿಸಿತು ಮನಸ್ಸು! ಇದರಿಂದ ಆನಂದನಿಗೆ ಚಿತ್ರದಲ್ಲಿ ಕೊಂಚ ವಾದರೂ ಆಸಕ್ತಿಯಿರಲಿಲ್ಲ. ತೆರೆದ ಕಣ್ಣಿನಿಂದ ತೆರೆಯಮೇಲೆ ಮತ್ತೇನನ್ನೋ ಚಿತ್ರಿಸಿಕೊಳ್ಳುತ್ತಿದ್ದ. ಲಲಿತ ಮಾತ್ರ ಪಕ್ಕದಲ್ಲಿ ಕುಳಿತು ಚಿತ್ರದಲ್ಲಿ ಪೂರ್ಣ ಮಗ್ನಳಾಗಿದ್ದಳು!

ಅನುವಿಗೆ ಆಗಲೇ ಆನಂದ ಬಿಡುಗಡೆಯಾದ ಸುದ್ದಿ ಪತ್ರಿಕೆಯ ಮೂಲಕ ತಿಳಿದಿತ್ತು. ಅಂದು ಮಧ್ಯಾಹ್ನ ತಾನೇ ರಾಜುವೂ ಆ ವಿಚಾರವಾಗಿ ಅವಳಿಗೆ ಹೇಳಿದ್ದ. ಆಗ ಅವಳಿಗೆ ತಾನೇ ತಾನಾಗಿ ಅಂದಿನ ನೆನಪು ಬಂದು ಮೈ ಜಿಲ್ಲೆಂದಿತು.

"ಅವನಿಗೆ ಬಿಡುಗಡೆಯಾದರೆಷ್ಟು—ಬಿಟ್ಟರೆಷ್ಟು" ಎಂದುಕೊಂಡು ಸುಮ್ಮನಾಗಿದ್ದಳು.

ಆದರೆ ಈಗ ಆಕಸ್ಮಿಕವಾಗಿ ಆ ತಿರುವಿನಲ್ಲಿ ಆನಂದನ ಕೈಗೆ ತನ್ನ ಕೈ ತಾಗಿದಾಗ ಮೈ ಪುಲಕಗೊಂಡಿತ್ತು. ಆಗ ಕತ್ತೆತ್ತಿ ನೋಡಿದ್ದಳು. ತಾನು ಕಂಡುದರಿಂದ ಬೆಚ್ಚಿದ್ದಳು. ಆ ಸ್ಥಿತಿಯಲ್ಲಿ ಆನಂದನನ್ನು ಕಾಣುವೆನೆಂದು ಅವಳು ಕನಸಿನಲ್ಲಿ ಕೂಡ ಎಣಿಸಿರಲಿಲ್ಲ. ಅಬ್ಬಾ! ಎಷ್ಟೊಂದು ಇಳಿದು ಹೋಗಿದ್ದ—ಬತ್ತಿದ ಗಲ್ಲ, ಗುಳಿಬಿದ್ದ ಕಣ್ಣುಗಳು ಬಿಳಿಚಿಕೊಂಡ ಬಾಡಿದ ಮುಖ—ಕ್ಷಯರೋಗ ಬಂದಂತೆ ತೆಳ್ಳಗಾಗಿ ಹೋಗಿದ್ದ. ಈಗಲೋ ಆಗಲೋ ಸ್ಮಶಾನದ ಹಾದಿ ಹಿಡಿಯುವವನಂತೆ ತೋರಿದ! ಅವನ ಸ್ಥಿತಿ ಯಾರಿಗಾದರೂ ಹೆದರಿಕೆಯಾಗುವಂತಿತ್ತು. ಅವನನ್ನು ನೋಡಿದಾಗ ಅನುವಿನ ಮನಸ್ಸು "ಅಯ್ಯೋ" ಎಂದು ಮರುಗಿತು. "ಪಾಪ! ಸೆರೆಮನೆಯಲ್ಲಿ ಹೇಗಾಗಿ ಹೋಗಿದಾನೆ. ಎಷ್ಟು ಕಷ್ಟಪಟ್ಟನೋ!" ಎಂದು ಮನಸ್ಸು ಕರಗಿತು. ಆದರೆ ಮರುಕ್ಷಣವೇ ಆ ದೃಶ್ಯ!—ಅಂದಿನ ದೃಶ್ಯ! ಈ ಎರಡು ದೃಶ್ಯಗಳೂ—ಎರಡು ಚಿತ್ರಗಳೂ ಮನಸ್ಸಿನ ತೆರೆಯ ಮೇಲೆ ಒಂದಾದ ಮೇಲೊಂದರಂತೆ ಹಾಯುತ್ತಿದ್ದುವು. ಅದೇ ನಡುಗುವ ತುಟಿ, ಕಂದಿದ ಮುಖ, ಗುಳಿಬಿದ್ದರೂ ಕಾಂತಿಯುತ ಕಣ್ಣುಗಳು—ಎಲ್ಲಕ್ಕೂ ಕೊನೆಯಾಗಿ ನಡುಗುವ ದನಿಯಲ್ಲಿ ಅವನು "ಕ್ಷಮಿಸಿ" ಎಂದುದು! ರಾತ್ರಿಯೆಲ್ಲಾ ಅನುವಿಗೆ ಅದೇ ಚಿಂತೆ—ಕೊಠಡಿಯ ಒಂದೊಂದು ಮೂಲೆಯಿಂದಲೂ ಅವನ ಈ ರೂಪ "ಕ್ಷಮಿಸಿ" ಎನ್ನುವಂತೆ ತೋರುತ್ತಿತ್ತು. ಎಷ್ಟು ಯತ್ನಿಸಿದರೂ ಆ ದೃಶ್ಯ ಮರೆಯಲಾಗಲಿಲ್ಲ.

ನಡುರಾತ್ರಿಯ ತಂಗಾಳಿ ಬೀಸಿದಾಗ ಸ್ವಲ್ಪಸ್ವಲ್ಪವಾಗಿ ನಿದ್ರೆ ಬಂದು ಆವರಿಸಿ ಈ ಚಿಂತೆಯನ್ನು ಗೋರಿ ಮಾಡಿತು. ಆದರೆ ಕನವರಿಕೆ! ಅಲ್ಲಿಯೂ ಆನಂದನ ರೂಪ ಮನಕರಗುವಂತೆ "ಕ್ಷಮಿಸಿ" ಎಂದಿತು ಅನು ಗಾಬರಿಯಿಂದ ಎಚ್ಚೆತ್ತು ದೀಪಹಾಕಿದಳು ಅದು ಕನಸೆಂದು ಮನವರಿಕೆಯಾಗಿ ನಸುನಕ್ಕು ದೀಪವಾರಿಸಿ ಮತ್ತೆ ಮಲಗಿದಳು. ಹೊರಗಡೆಯಲ್ಲಿ ಗಾಳಿ ಬಿಸುಸುಯ್ಯುತ್ತಿತ್ತು. ಗಿಡದೆಲೆಗಳ ಮರೆಯಿಂದ ಕೋಗಿಲೆಯೊಂದು ತನ್ನ ಎದೆಯಳಲನ್ನು ಗಾಳಿಯಲ್ಲಿ ತೇಲಿಬಿಡುತ್ತಿತ್ತು!

## ೧೩

ಆನಂದ ಜೈಲಿನಿಂದ ಬಿಡುಗಡೆಯಾಗಿ ಬಂದು ಆಗಲೇ ೨೦-೨೨ ದಿನಗಳಾಗಿತ್ತು. ಮರುದಿನವೇ ಅವನ ಹುಟ್ಟಿದ ಹಬ್ಬ—ಮಾರ್ಚಿ ೨೦ ! ಹಳ್ಳಿಗೆ ಹೋಗಿ ಕೆಲವು ದಿನ ವಿಶ್ರಾಂತಿ ತೆಗೆದುಕೊಂಡಿದ್ದ. ಪಾರ್ವತಮ್ಮನವರ ಆರೈಕೆಯಿಂದ ಈಗ ಮೈ ಕೈ ಕೊಂಚ ತುಂಬಿಕೊಂಡಿತ್ತು. ಮೈಸೂರಿಗೆ ಹುಟ್ಟಿದ ಹಬ್ಬಕ್ಕೆಂದೇ ಅವನನ್ನೂ ಪಾರ್ವತಮ್ಮನವರನ್ನೂ ಲಲಿತ ಕರೆಸಿಕೊಂಡಿದ್ದಳು. ಅಕ್ಕನ ಸಂತೋಷವೆಂದು ಆನಂದ ತನಗೆ ಮನಸ್ಸಿಲ್ಲದಿದ್ದರೂ ಒಪ್ಪಿಕೊಂಡಿದ್ದ.

ಲಲಿತಳಿಗಂತೂ ಎಂದೂ ಇಲ್ಲದ ಸಡಗರ ! ಇದುವರೆಗೂ ಆನಂದನಿಗೆ ಹುಟ್ಟಿದ ಹಬ್ಬ ಬಂದರೂ ಏನೂ ಆಚರಿಸುತ್ತಿರಲಿಲ್ಲ. ಒಂದಿಷ್ಟು ಪಾಯಸ ಕೂಡ ಮಾಡುತ್ತಿರಲಿಲ್ಲ. ಆದರೆ ಈ ಬಾರಿ ಮಾತ್ರ ಚೆನ್ನಾಗಿ ಮಾಡುವ ಆಸೆ–ಸಡಗರ. ಈ ಬಾರಿ ಅವನಿಗೆ ಏನಾದರೂ ಉಡುಗೊರೆ ಕೊಡಬೇಕೆಂದೂ ಅವಳಿಷ್ಟ–ಏನು ಕೊಡಲೆಂದು ಒಂದೇ ಸಮನಾಗಿ ಯೋಚಿಸಿದಳು. ಯಾವ ತೀರ್ಮಾನಕ್ಕಾದರೂ ಬಂದರೆ ತಾನೇ ? ಪುಸ್ತಕ !— ಉಹುಂ ! ಒಂದೆರಡು ಬಾರಿ ಓದಿ ಬೀರುವಿಗೆ ಎಸೆದು ಬಿಟ್ಟರಾಯಿತು. ಸರಿಗೆ ಪಂಚೆ ತರಲು–ಅವನು ಅದನ್ನು ಉಡುವುದಿಲ್ಲ. ಹೀಗಾಗಿ ಏನು ತರುವುದೆಂಬುದೇ ತೋಚದಾಯಿತು. ಪಾರ್ವತಮ್ಮನವರೂ ಅವಳೂ ಯೋಚಿಸಿ ಯೋಚಿಸಿ ಕೊನೆಗೆ ಒಂದು ಉಂಗುರ ತಂದುಕೊಡುವುದೆಂದು ಸಂಜೆಯ ಹೊತ್ತಿಗೆ ತೀರ್ಮಾನಿಸಿಕೊಂಡರು.

ಆ ದಿನ ರಾಜುವಿನ ತರಗತಿಯವರಿಗೆ ಪರೀಕ್ಷೆ ಮುಗಿಯಿತು. ಪರೀಕ್ಷೆ ಮುಗಿದ ಸಂತೋಷಕ್ಕೆ ರಾಜು ತನ್ನ ತರಗತಿಯವರಿಗೆ ಒಂದು ಸಂತೋಷ ಕೂಟವನ್ನೇರ್ಪಡಿಸಿದ್ದ. ಅವನಿಗೇನು ತೋಚಿತೋ ಏನೋ ಆನಂದನನ್ನು ಕರೆಯಬೇಕು ಎನಿಸಿತು. ಬೆಳಗ್ಗೆ ಹೋಗಿ ಆನಂದನನ್ನು ಕರೆದುಬಂದ.

ಆನಂದನಿಗೆ ಹೋಗಲಿಷ್ಟವಿಲ್ಲ. ಅವರು ಸಹಪಾಠಿಗಳು. ಒಂದೇ ತರಗತಿಯವರು. ಸಂತೋಷಕೂಟವೇರ್ಪಡಿಸಿಕೊಂಡರೆ ನಾನೇಕೆ ಅಲ್ಲಿಗೆ ಹೋಗಬೇಕು ? ಎಂದು ಅವನ ಯೋಚನೆ. ಇಷ್ಟಾಗಿ ಅಲ್ಲಿಗೆ ಹೋಗುವುದರಿಂದ

ಮನಸ್ಸಿಗೆ ಮತ್ತೆ ಅಶಾಂತಿಯಾಗಬಹುದೆಂಬ ಹೆದರಿಕೆ. ಆದರೆ ಮನಸ್ಸು ಹೋಗಬೇಕು ಎಂದೂ ಕೋರೆಯುತ್ತಿತ್ತು. ಅಲ್ಲಿಗೆ ಹೋದರೆ ಅನುವನ್ನೂ ಕಾಣಬಹುದು. ಎಲ್ಲರೊಂದಿಗೂ ಹತ್ತು ನಿಮಿಷ ಸಂತೋಷಕೂಟದಲ್ಲಿ ಬೆರೆತು ಹಾಯಾಗಿರಬಹುದೆಂದುಕೊಂಡ ಹೀಗಾಗಿ ಹಲವು ನಿಮಿಷ ಮನಸ್ಸು ತುಯ್ದಾಡಿತು. ಕೊನೆಗೆ ಅನುವನ್ನು ಕಾಣುವ ಸೆಳೆತ, ಜೊತೆಗೆ ರಾಜುವಿನ ಮನಸ್ಸನ್ನು ನೋಯಿಸಬಾರದೆನ್ನುವ ಇಚ್ಛೆ ಅವನನ್ನು ಸಂತೋಷಕೂಟಕ್ಕೆ ಎಳೆದು ತಂದಿತು. ಸುಮಾರು ೫ ಗಂಟೆಯ ವೇಳೆಗೆ ಆನಂದ ಕಾಲೇಜಿಗೆ ಹೊರಟು ಹೋದ.

ಪಾರ್ವತಮ್ಮನವರು ಪೇಟೆಗೆ ಹೋಡಲು ಸಿದ್ಧರಾಗಿದ್ದರು ಲಲಿತ ಮುಖ ತೊಳೆದುಕೊಂಡು ಬರುವೆನೆಂದು ಬಚ್ಚಲುಮನೆಗೆ ಹೊರಟಳು. ಬೆಳಿಗ್ಗೆಯಿಂದ ಸಡಗರದಿಂದಿದ್ದಳು. ಮಧ್ಯಾಹ್ನ ಕೊಂಚಹೊತ್ತು ನಿದ್ರೆ ಮಾಡಿದಳು. ಆದರೆ ಮುಖ ಸಪ್ಪಗಿತ್ತು. ಲಲಿತ ಬಚ್ಚಲುಮನೆಯಿಂದ ಹಿಂತಿರುಗಿ ಬಂದಾಗ ಮುಖ ಮತ್ತೂ ಸಪ್ಪಗಾಗಿತ್ತು. ಮುಖದಲ್ಲಿ ನೋವಿನ ನೆರಳಿತ್ತು. ಏನೋ ಒಂದು ರೀತಿಯ ಸುಸ್ತು, ಸಂಕಟ! ಪಾರ್ವತಮ್ಮನವರಿಗೆ ಅವಳನ್ನು ಕಂಡು ಹೆದರಿಕೆಯಾಯಿತು.

"ಏನೇ ಲಲಿತ, ಸಪ್ಪಗಿದ್ದೀಯಲ್ಲೇ" ಎಂದರು ಗಾಬರಿಯಿಂದ.

"ಏನೂ ಇಲ್ಲಮ್ಮ."

ಲಲಿತ ನಿಧಾನವಾಗಿ ಮೆಲ್ಲನೆ ಕೋಣೆಗೆ ಹೋದಳು. ಹೊಸ ಸೀರೆಯನ್ನುಟ್ಟು ಕೊಳ್ಳಲು ಪೆಟ್ಟಿಗೆ ಬಾಗಿಲು ತೆರೆದಳು. ಆಗಲೇ ಏನೋ ಒಂದು ತರಹ ತಲೆ ತಿರುಗಿದಂತಾಗಿ ಪೆಟ್ಟಿಗೆಯನ್ನೇ ಒರಗಿಕೊಂಡು ಒಂದೆರಡು ನಿಮಿಷ ನಿಂತು ಸುಧಾರಿಸಿಕೊಂಡಳು. ಸೀರೆಯ ನೆರಿ ಹಿಡಿಯೋಣವೆಂದು ಎದ್ದುನಿಂತರೆ ಸೊಂಟವೆಲ್ಲಾ ನೋವು! ಯಾರೋ ಕಬ್ಬಿಣದ ಇಕ್ಕಳಹಾಕಿ ಮೂಳೆಗಳನ್ನು ಮುರಿಯುತ್ತಿದ್ದಂತೆ ತೋರುತ್ತಿತ್ತು. ಬೆಳಿಗ್ಗೆಯಿಂದಲೂ ಕೆಲಸ ಮಾಡಿದುದ ರಿಂದ ಸುಸ್ತಾಗಿದೆಯೆಂದುಕೊಂಡಳು. ಆದರೆ ಮಧ್ಯಾಹ್ನ ನಿದ್ರೆ ಮಾಡಿದ್ದಳು ಆಗೇನೂ ನೋವಿರಲಿಲ್ಲ. ಇದುವರೆಗೂ ಇಲ್ಲದುದು ಈಗ ಕೊಂಚ ಹೊತ್ತಿನಿಂದ ಅಪಾರಹೊಟ್ಟೆ ನೋವು! ತಡೆಯಲಾಗದಷ್ಟು ಹೊಟ್ಟೆ ತೊಳಸು!

ಹಾಗೆಯೇ ನೆಲದ ಮೇಲೆ ಕುಳಿತುಕೊಂಡಳು ಲಲಿತ! ಒಂದೆರಡು ನಿಮಿಷವಾದನಂತರ ನೋವು ಕೊಂಚ ಕಡಿಮೆಯಾದಂತೆ ತೋರಿತು

" ಅಮ್ಮ " ಎಂದು ಮೆಲ್ಲನೆ ಕೂಗಿದಳು. ಪಾರ್ವತಮ್ಮನವರು ಗಾಬರಿಯಿಂದ ಓಡಿಬಂದರು.

" ಏನೇ ? "

" ಯಾಕೋ ಕೊಂಚ ಹೊಟ್ಟೆ ತೊಳಸುತ್ತಮ್ಮ" ಎಂದಳು ಲಲಿತ ಸಣ್ಣ ದನಿಯಲ್ಲಿ.

" ವಾಂತಿಗೀಂತಿಯಾಯಿತೇನೇ? ವಾಂತಿ ಬರುತ್ತೆಯೇನೇ ? " ಎಂದರು ಪಾರ್ವತಮ್ಮನವರು ಗಾಬರಿಯಿಂದ.

" ಏನೂ ಇಲ್ಲಮ್ಮ ! "

ಲಲಿತಳ ಮುಖದಲ್ಲಿ, ಮಾತಿನಲ್ಲಿ ಮರೆಮಾಚಿದ ನೋವು ಎದ್ದು ಕಾಣುತ್ತಿತ್ತು.

" ಕೊಂಚ ಪಾನಕ ಮಾಡಿಕೊಡಲೇನೇ ? "

" ಹುಂ "

ಲಲಿತ ಹಾಗೆಯೇ ಚಾಪೆಯ ಮೇಲೆ ಮಲಗಿಕೊಂಡಳು. ಸಂಕಟ ಮತ್ತೆ ಹೆಚ್ಚಾಗಿತ್ತು. ಕಣ್ಣಿಗೆ ಕತ್ತಲು ಕವಿಯುವಂತೆ ಮೆಲ್ಲನೆ ಮಸಕಾಗುತ್ತಿತ್ತು. ಪಾರ್ವತಮ್ಮನವರು ಅವಸರವಸರವಾಗಿ ಮಾಡಿ ತಂದುಕೊಟ್ಟ ಪಾನಕ ಕುಡಿದ ಮೇಲೆ ಕೊಂಚ ಸಮಾಧಾನ–ಹೊಟ್ಟೆಯಲ್ಲಿದ್ದ ಬೆಂಕಿ ತಣ್ಣಗಾದಂತಾಯಿತು

" ಈಗ ಹೇಗಿದೆಯೇ ? " ಎಂದರು ಪಾರ್ವತಮ್ಮ.

" ಕೊಂಚ ವಾಸಿ ಅಮ್ಮ , ಇನ್ನೊಂದು ಸ್ವಲ್ಪ ಪಾನಕ ಕೊಡು "

ಪಾರ್ವತಮ್ಮನವರು ಮಗಳಿಗೆ ಇನ್ನೂ ಒಂದಿಷ್ಟು ಪಾನಕ ಬಗ್ಗಿಸಿ ಕೊಟ್ಟರು.

" ಮೈ ಚೆನ್ನಾಗಿಲ್ಲದಿದ್ದರೆ ಮಲಗಿಕೋ ಲಲಿತ. ಉಂಗುರ ತರದಿದ್ದರೇನೂ ಉಳಿದುಹೋಗಲಿಲ್ಲ ನೀನು ಚೆನ್ನಾಗಿದ್ದರೆ ಸಾಕು. " ಎಂದರು.

" ಏನೂ ಇಲ್ಲಮ್ಮ ಈ ನೋವೆಲ್ಲಾ ಸ್ವಲ್ಪ ಹೊತ್ತಿರುತ್ತೆ ಅಷ್ಟೆ—ಆ ಮೇಲೆ ತಾನಾಗಿಯೇ ಸರಿಹೋಗುತ್ತೆ. "

" ನಾಳೆ ಹೋಗೋಣ, ಈವತ್ತು ಮಲಗಿಕೋ ಲಲಿತ. "

"ಚೆನ್ನಾಗಿದೆ ಅಮ್ಮ–ನಾಳೆ ಅವನಿಗೆ ಹುಟ್ಟಿದಹಬ್ಬ. ನಾಳೆಯೆಲ್ಲಿ ಹೋಗುವುದಮ್ಮ. ಈಗೇನೂ ಪರವಾಗಿಲ್ಲಮ್ಮ. ನಾನೊಬ್ಬಳೇ ಅವನಿಗಿರುವುದು. ನಾನೂ ಏನೂ ತರದಿದ್ದರೆ ಅವನ ಮನಸ್ಸಿಗೆ ಹೇಗಾಗಬೇಡ! ಹೋಗಾಡಿ ತರಿಸಮ್ಮ" ಎಂದಳು ಲಲಿತ.

"ನೋಡೇ, ಈವತ್ತು ಬೇಡಕಣೇ!"

"ಪರವಾಗಿಲ್ಲವಮ್ಮ—ಈಗ ವಾಸಿ."

ಲಲಿತ ಪ್ರಯಾಸದಿಂದ ಎದ್ದು ನಿಂತುಕೊಂಡಳು. ಮುಖದ ಮೇಲೆ ತೋರಿಕೆಯ ಗೆಲುವು ತಂದುಕೊಂಡಳು ಪಾರ್ವತಮ್ಮನವರು ಗೊಣಗುತ್ತ ಗಾಡಿ ತರಹೇಳಿದರು.

ಗಾಡಿ ಹತ್ತುವ ವೇಳೆಗೆ ಲಲಿತಳಿಗೆ ನೋವು ಕಡಿಮೆಯಾಗಿತ್ತು ಇದರಿಂದ ಪಾರ್ವತಮ್ಮನವರಿಗೂ ಮನಸ್ಸಿನ ಗಾಬರಿ ಕೊಂಚ ಕಡಿಮೆಯಾಯಿತು. ಆದರೆ ಗಾಡಿಯ ಕುಲುಕಾಟದಿಂದ ಹೊಟ್ಟೆಯ ತೊಳಸು ಏರುತ್ತ ಬಂತು. ಅಂಗಡಿಗೆ ತಲುಪುವ ವೇಳೆಗೆ ಲಲಿತಳ ಮುಖದ ಮೇಲೆ ವೇದನೆ ಒಡೆದು ಮೂಡಿತ್ತು. ಆದರೂ ಬಹಳ ಪ್ರಯಾಸದಿಂದ ನೋವನ್ನು ತಡೆದುಕೊಂಡು ಅಂಗಡಿಗೆ ಹೋದಳು. ಇಬ್ಬರೂ ಕೆಲವು ನಿಮಿಷ ವಿಚಾರ ಮಾಡಿ ಒಂದು ಚಿನ್ನದ ಉಂಗುರವನ್ನು ವ್ಯಾಪಾರ ಮಾಡಿದರು. ಲಲಿತಳಿಗೆ ಅಲ್ಲಿ ಕುಳಿತಷ್ಟು ಹೊತ್ತು ನೋವು ತಗ್ಗುತ್ತ ಬಂತು. ಉಂಗುರವನ್ನು ನೋಡುತ್ತಾ ನೋಡುತ್ತಾ ಅದನ್ನು ಕೈಬೆರಳಿಗೆ ಹಾಕಿಕೊಂಡಳು. ಮನೆಗೆ ಬಂದೊಡನೆಯೇ ತೆಗೆದು ಪೆಟ್ಟಿಗೆಯಲ್ಲಿಡುವುದೆಂದುಕೊಂಡಳು. ಅಂಗಡಿಯ ಶೆಟ್ಟಿಗೆ ಹಣಕೊಟ್ಟು ಬಂದು ಗಾಡಿ ಹತ್ತಿದಳು.

× × × × ×

ಆನಂದ ಸಂತೋಷಕೂಟ ಮುಗಿಸಿಕೊಂಡು ಮನೆಗೆ ಬೇಗನೇ ಹಿಂತಿರುಗಿದ. "ಅಮ್ಮ–ಅಜ್ಜಿ ಪೇಟೆಗೆ ಹೋದರು" ಎಂದು ನಾಣಿ ವರದಿಯೊಪ್ಪಿಸಿದ. ಏನೋ ಸಾಮಾನು ತರಲು ಹೋಗಿರಬೇಕೆಂದುಕೊಂಡು ಆನಂದ ತನ್ನ ಕೋಣೆಗೆ ಹೋದ.

ಆನಂದನ ಮನಸ್ಸು ಅರಳಿತ್ತು. ಸಂತೋಷಕೂಟದಿಂದ ಮನಸ್ಸು ಆಹ್ಲಾದಗೊಂಡಿತ್ತು. ತನ್ನಷ್ಟಕ್ಕೆ ತಾನೇ ಯಾವುದೋ ಹಾಡನ್ನು ಸೀಟಿ

ಹಾಕುತ್ತಾ ರಾಮುವಿಗೊಂದು ಪತ್ರ ಬರೆದ. ಪತ್ರವನ್ನು ಅಂಚೆಪೆಟ್ಟಿಗೆಗೆ ಹಾಕಲು ಮನೆಬಿಟ್ಟು ಹೊರಟು, ಸ್ಟೇಷನಿನಲ್ಲಿ ಅದನ್ನು ಅಂಚೆಪೆಟ್ಟಿಗೆಗೆ ಹಾಕಿ ಕುಕ್ಕನಹಳ್ಳಿ ಕೆರೆಯಕಡೆಗೆ ನಡೆದ. ಮನಸ್ಸಿನಲ್ಲಿ ಏನೇನೋ ವಿಚಾರ ತರಂಗ ! ಕುಕ್ಕನಹಳ್ಳಿಯ ಕೆರೆಯ ಎಡಪಾರ್ಶ್ವದ ಮರಗಳ ಮೇಲೆ ಸೂರ್ಯ ರಶ್ಮಿ ಹೊಳೆಯುತ್ತಿತ್ತು. ಹಳದಿ, ಕೆಂಪು ಹೂ-ಗಿಡಗಳಿಂದ ನೆಲದಮೇಲೆಲ್ಲಾ ಹೂವುದುರಿ ಬಣ್ಣದ ಹೂವಿನ ಹಾಸಿಗೆ ಸಜ್ಜಾಗಿತ್ತು. ಕೆರೆಯ ನೀರಿನ ಸಣ್ಣಲೆಗಳು ದಡಕ್ಕೆ ಮುತ್ತಿಕ್ಕುತ್ತಿದ್ದವು. ಆನಂದ ಅಲ್ಲಿಯೇ ಅದನ್ನೇ ನೋಡುತ್ತಾ ಕುಳಿತಿದ್ದ. ಅವನು ಅಲ್ಲಿಂದ ಏಳುವ ವೇಳೆಗೆ ಕೆರೆಯ ನೀರಿನಲ್ಲಿ ಬೀದಿಯ ದೀಪಗಳ ಪ್ರತಿಬಿಂಬ ಛಳಿಯಿಂದ ನಡುಗುತ್ತಿತ್ತು.

× × + × ×

ಲಲಿತ ಗಾಡಿಯಿಂದಿಳಿದವಳು ಮನೆಯೊಳಹೊಕ್ಕಳು. ಅಂಗಳದಲ್ಲಿ ಕಾಲಿಡುತ್ತಿದ್ದಂತೆಯೇ ಜ್ಞಾನ ತಪ್ಪಿದಂತಾಗಿ ಕುಸಿದಳು. ಪ್ರಪಂಚವೆಲ್ಲಾ ತನ್ನ ಸುತ್ತ ಸುತ್ತುತ್ತಿರುವಂತೆ ಭಾಸವಾಯಿತು. ಎಲ್ಲವೂ ಮಸಕು ಮಸಕು ಕಣ್ಣಿನ ಮೇಲೊಂದು ಮಂಜಿನ ತೆರೆ ಬಿದ್ದಂತಾಯಿತು. ನಿಮಿಷವೆರಡರಲ್ಲೇ ತೆರೆ ದಪ್ಪವಾಗಿ ಕಣ್ಣಿಗೆ ಕತ್ತಲು ಕವಿಯಿತು. ಹೊಟ್ಟೆಯನ್ನು ಮಚ್ಚಿನಿಂದ ಕೊಚ್ಚಿ ಚೂರುಚೂರು ಮಾಡುವಂತೆ ನೋವಾಗುತ್ತಿತ್ತು. ಜ್ಞಾನ ತಪ್ಪಿತು ! ಪಾರ್ವತಮ್ಮನವರಿಗೆ ಗಾಬರಿ-ದಿಕ್ಕೇ ತೋಚದು ಆಕಾಶ ತಲೆಯಮೇಲೆ ಕುಸಿದುಬಿದ್ದಂತಾಗಿತ್ತು.

"ಲಲಿತಾ, ಲಲಿತಾ" ಎಂದು ಸುಮ್ಮನೆ ಕೂಗಿದರು. ಅವಸರವಸರವಾಗಿ ಓಡಿಹೋಗಿ ಒಂದಿಷ್ಟು ನೀರು ತಂದು ತಲೆಗೆ ತಟ್ಟಿದಾಗಲೇ ಲಲಿತಳಿಗೆ ಕೊಂಚ ತಿಳಿವು. ಲಲಿತಾ ಮುಸುಗುಟ್ಟಿದಳು. ನೋವಿನಲ್ಲಿ ಸಂಕಟಪಟ್ಟಳು. ಅದೇ ಗಾಡಿಯಲ್ಲೇ ಆಸ್ಪತ್ರೆಗೆ ಕರೆದುಕೊಂಡು ಹೋದರು.

ಆಸ್ಪತ್ರೆಯಲ್ಲಿ ಆಪರೇಷನ್ ರೂಮಿನಿಂದ ಹೊರಕ್ಕೂ ಒಳಕ್ಕೂ ನರ್ಸುಗಳು ಸುಮ್ಮನೇ ಓಡಾಡುತ್ತಿದ್ದರು. ಪಾರ್ವತಮ್ಮನವರು ಜೀವ ಕೈಯಲ್ಲಿ ಹಿಡಿದು ಹೊರಗಡೆ ಕಾದಿದ್ದರು. ಮೈಯೆಲ್ಲಾ ನಡುಗುತ್ತಿತ್ತು. ಹೇಗೋ ಏನೋ-ಏನಾಗಿ ಹೋದೀತೋ ಎಂಬ ಹೆದರಿಕೆ-ಕಳವಳ ! ಎದೆ ನಡುಗುಟ್ಟುತ್ತಿತ್ತು. ಪ್ರತಿಯೊಬ್ಬರನ್ನೂ "ಈಗ ಹೇಗಿದೆಯಮ್ಮ ?" ಎಂದು

ಕೇಳುವರು. ಆ ಕಾತರದ ದನಿಯಲ್ಲಿ ಯಾವ ಕಲ್ಲೆದೆಗಾದರೂ ಕರುಣೆ ತುಂಬುವ ಶಕ್ತಿಯಿತ್ತು. ಆದರೆ ಸಾವಿನೊಂದಿಗೆ ಸರಸವಾಡುವ ನರ್ಸುಗಳು ಮನುಷ್ಯ ಸ್ವಭಾವವನ್ನೂ, ಮರುಕವನ್ನೂ, ಮಾನವತೆಯನ್ನೂ ಮನೆಯ್ಲಲಿಯೇ ಮರೆತು ಬಂದಂತಿತ್ತು. ಪಾರ್ವತಮ್ಮನವರ ಮಾತುಗಳು ಕೇಳಿದರೂ. ಕೇಳಿಸದಂತಿದ್ದರು. ಅವರಲ್ಲಿ ಇರುವರೆಂಬುದನ್ನೂ ಯಾರೂ ಲೆಕ್ಕಕ್ಕೆ ತರಲಿಲ್ಲ ಒಬ್ಬಳು ಆಂಗ್ಲೊ ಇಂಡಿಯನ್ ನರ್ಸಂತೂ ಕೊನೆಗೆ ಕೋಪದಿಂದ "Shut up you fool" ( ಓ ಮುಚ್ಚು ಬಾಯಿ ಹುಚ್ಚಿ ) ಎಂದು ಗದರಿಸಿ ಸೆಟೆದು ಕೊಂಡು ಒಳಕ್ಕೆ ಹೋದಳು

"ನನ್ನ ಲಲಿತಳನ್ನುಳಿಸು ತಾಯಿ, ನಿನಗೆ ಕುಂಕುಮಾರ್ಚನೆ ಮಾಡಿಸುತ್ತೇನೆ, ಹೂವಿಳ್ಯ ಮಾಡಿಸುತ್ತೇನೆ" ಎಂದು ಪಾರ್ವತಮ್ಮನವರು ಹರಕೆ ಹೊತ್ತರು.

ಜ್ವರ ಇದ್ದಕ್ಕಿದ್ದಂತೆ ಇಳಿದು ಲಲಿತಳಿಗೆ ಜ್ಞಾನಕೂಡ ಬಂದಿತ್ತು ನರ್ಸುಗಳು ತಮ್ಮತಮ್ಮಲ್ಲಿಯೇ ಪಿಸಪಿಸ ಮಾತಾಡಿಕೊಂಡರು ಕೊನೆಗೆ ಒಬ್ಬಳು ಹೋಗಿ ಪಾರ್ವತಮ್ಮನವರನ್ನು ಒಳಕ್ಕೆ ಕರೆದುತಂದಳು ಒಳಕ್ಕೆ ಕಾಲಿಡುತ್ತಿದ್ದಂತೆಯೇ ಪಾರ್ವತಮ್ಮನವರಿಗೆ ಎದೆನಡುಕ ಹೆಚ್ಚಾಯಿತು ದುಃಖ ಕಟ್ಟೆಯನ್ನೊಡೆಯಿತು.

"ಹುಶ್! ಇಲ್ಲಿ ಅಳಕೂಡದು" ಎಂದಳು ನರ್ಸ.

ಪಾರ್ವತಮ್ಮನವರು ಲಲಿತಳನ್ನು ಮಲಗಿಸಿದ್ದ ಮಂಚದ ಪಕ್ಕಕ್ಕೆ ಬಂದು ನಿಂತರು ನೀರವ ಮೌನ–ಸ್ಮಶಾನಮೌನ!—ಸುತ್ತು ಬಿಳಿಬಟ್ಟೆ ಧರಿಸಿ ಮುಖಕ್ಕೆ ಮುಖವಾಡ ಧರಿಸಿದ ನರ್ಸುಗಳು, ಮೇಜಿನ ಪಕ್ಕದಲ್ಲಿ ಶಸ್ತ್ರಗಳು–ಪಕ್ಕದಲ್ಲಿ ಬಿಸಿನೀರಿನಿಂದ ತುಂಬಿದ ಪಾತ್ರೆ–ಅಲ್ಲಿಂದ ಹೊಗೆ ಮೇಲೇರುತ್ತಿತ್ತು. ಪಾರ್ವತಮ್ಮನವರಿಗೆ ಹೆದರಿಕೆಯಾಯಿತು

ಲಲಿತ ಮೆಲ್ಲನೆ ತಾಯಿಯ ಕಡೆಗೆ ಕಣ್ಣು ಹೊರಳಿಸಿದಳು. ಮಾತ್ರನಾಡಲು ತ್ರಾಣವೇ ಇಲ್ಲ ಗಂಟಲು ಬಿಗಿದುಕೊಂಡು ಬಂದಿತು. ನರ್ಸ ಒಂದು ತೊಟ್ಟು ಹಾಲು ಕುಡಿಸಿದಳು.

ಪಾರ್ವತಮ್ಮನವರು ಬಹಳ ಪ್ರಯಾಸದಿಂದ "ಈಗ ಹೇಗಿದೆ ಲಲಿತಾ?" ಎಂದು ಕೇಳಿದರು.

ಲಲಿತಾ ಕಣ್ಣುನೋಟದಿಂದಲೇ ಸ್ವಲ್ಪ ವಾಸಿಯೆಂದು ಸನ್ನೆ ಮಾಡಿದಳು ಉಂಗುರವಿದ್ದ ಬೆರಳನ್ನು ಪಾರ್ವತಮ್ಮನವರ ಕಡೆಗೆ ಹೊರಳಿಸಿ ಅದನ್ನು ತೆಗೆದುಕೊಳ್ಳುವಂತೆ ಸೂಚಿಸಿದಳು.

" ಆನಂದ—ಉಂಗುರ—ಆನಂದ " ಎನ್ನುವಷ್ಟರಲ್ಲೇ ಬಾಯಿ ಆರಿತು; ಮಾತೇ ಹೊರಡದಂತಾಯಿತು. ಮತ್ತೆ ಏನೇನು ಹೇಳಬೇಕೆಂದಿದ್ದಳೋ ಏನೋ!

" ನಾನೂ ಆನಂದನೂ ಬೆಳಿಗ್ಗೆ ಬರುತ್ತೇವೆ " ಎಂದರು ಪಾರ್ವತಮ್ಮನವರು.

" ಹೊರಡಿ ಹೊತ್ತಾಯಿತು. " ಎಂದು ಗರ್ಜಿಸಿದಳು ನರ್ಸು.

ಪಾರ್ವತಮ್ಮನವರು ಮನಸ್ಸಿಲ್ಲದ ಮನಸ್ಸಿನಿಂದ ಅಲ್ಲಿಂದ ಹೊರಟರು. ಬಾಗಿಲಿನ ಬಳಿ ಬಂದರೆ ಮುಂದೆ ಹೋಗಲು ಕಾಲೇ ಒಗ್ಗದು. ಹಾಗೆಯೇ ಒಮ್ಮೆ ಲಲಿತಳ ಕಡೆಗೆ ತಿರುಗಿ ನೋಡಿದರು ಲಲಿತಳ ಕಾಂತಿಹೀನ ಕಣ್ಣಿನಲ್ಲಿ ಯಾವುದೋ ತಾಳಲಾರದ ಚಿಂತೆ ಮೂಡಿತ್ತು—ಕಾತರ, ಕಳವಳ ಕೂಡಿತ್ತು. ಪಾರ್ವತಮ್ಮನವರು ನಡೆಯಲಾರದೇ ಹೊರನಡೆದರು. ಬಾಗಿಲು ಕಿರ್ರೆನ್ನುತ್ತಾ ಮುಚ್ಚಿಕೊಂಡಿತು. ಹೊರಗೆ ಕಿಟಕಿಯ ಬಾಗಿಲಿನ ಸಂದಿಗಳ ಮೂಲಕ ಗಾಳಿ " ಸುಯ್ಯೋಂ " ಎಂದು ಬಿಸುಸುಯ್ಯುತ್ತಿತ್ತು!

ರಾತ್ರಿ ಮನೆಯಲ್ಲಿ ಯಾರಿಗೂ ನಿದ್ರೆಯಿಲ್ಲ. ನಾಗವಲ್ಲಿ ತಾಯಿಗಾಗಿ ರಾತ್ರಿಯೆಲ್ಲಾ ರಂಪ ಮಾಡುತ್ತಿದ್ದಳು. ಅತ್ತು ಅತ್ತು ಸೊರಗಿ ಅರ್ಧ ರಾತ್ರಿಯ ವೇಳೆಗೆ ಸುಸ್ತಿನಿಂದ ಅವಳಿಗೆ ನಿದ್ರೆ ಬಂದಿತು. ಅವಳ ಅಳುವಿನ ಧ್ವನಿಯಿಂದ ನರಸಿಂಹಯ್ಯನವರಿಗೆ ಕೊಂಚವೂ ನಿದ್ರೆ ಬರಲಿಲ್ಲ; ನಡುನಡುವೆ ಲಲಿತಳಿಗೆ ಹೇಗೋ ಏನೋ ಎಂಬ ಚಿಂತೆಯೂ ಬರುತ್ತಿತ್ತು! ಆನಂದನಂತೂ ಹಾಸಿಗೆಯ ಮೇಲೆ ಹಾಗೆಯೇ ತೆರೆದ ಕಣ್ಣಿನಿಂದ ಮಲಗಿದ್ದ. ಮನಸ್ಸಿನಲ್ಲಿ ಏನೋ ಕಳವಳ-ಹೆದರಿಕೆ. ಪಾರ್ವತಮ್ಮನವರು ರಾತ್ರಿಯೆಲ್ಲಾ ದೇವರ ಮುಂದೆ ಕುಳಿತು ಜಪ ಮಾಡುತ್ತಿದ್ದರು. ಇವರಿಬ್ಬರ ಹೃದಯದ ಕಳವಳವನ್ನು ಕಾಣದಂತೆ ಆಕಾಶದಲ್ಲಿ ಮೋಡ ತನ್ನಂತೆ ತಾನು ಸಾಗುತ್ತಿತ್ತು. ನಕ್ಷತ್ರಗಳು ಮಿನುಗುತ್ತಿದ್ದವು. ದೂರದಲ್ಲಿ ಬೀದಿಯ ನಾಯಿಯೊಂದು " ಕುಂಯ್ಯೋ ಮರ್‍ರ್ರೋ " ಎಂದು ಅಳುತ್ತಿತ್ತು!

ಬೆಳಗಾಗುವುದೇ ತಡ. ಆನಂದನೂ ಪಾರ್ವತಮ್ಮನವರೂ ಆಸ್ಪತ್ರೆಗೆ ಓಡಿದರು ಪಾರ್ವತಮ್ಮನವರಿಗಂತೂ ಎದೆ ನಡುಕ. ಹೇಗೋ–ಏನೋ—ಏನಾಗಿ ಹೋಗಿದೆಯೋ–ಎಂಬ ಭೀತಿ! ಹೇಳಲಾರದ ತಾಳಲಾರದ ಹೆದರಿಕೆ! ರಾತ್ರಿಯೆಲ್ಲಾ ನಿದ್ರೆಯಿಲ್ಲದೆ ಬೆಳಗಿನ ಜಾವ ಕೊಂಚ ತೂಕಡಿಸುತ್ತಿದ್ದಾಗ ಕನಸು–ಕೆಟ್ಟಕನಸು! ಆಸ್ಪತ್ರೆಗೆ ಬರುವ ತನಕ ಅವರ ಹೃದಯ ಕೇಳ ಬೇಕಲ್ಲ! ತಳಮಳ, ಕಳವಳ ಹೆಚ್ಚಾಗಿತ್ತು.

ಆಸ್ಪತ್ರೆಯಲ್ಲಿ ಬಂದು ವಿಚಾರಿಸಿದಾಗ ನರ್ಸ—"ಯಾರ ವಿಚಾರ ಕೇಳುತ್ತಿದ್ದೀರಿ ?" ಎಂದಳು.

"ಅದೇ ನಿನ್ನೆ ರಾತ್ರಿ—" ಎಂದು ಪಾರ್ವತಮ್ಮ ಆರಂಭಿಸಿದರು.

"ಹೆಣದ ವಾರಸುದಾರರು ನೀವೇನೋ ?"

ಪಾರ್ವತಮ್ಮನವರು ನಿಂತಲ್ಲಿಯೇ ನೆಲಕ್ಕೆ ಕುಸಿದರು. ಕಣ್ಣುಗಳಲ್ಲಿ ಸ್ಮಶಾನದ ಉರಿಯ ಹೊಗೆ ಮೂಡಿದಂತಾಯಿತು. ಮೊದಲು ಶೂನ್ಯ! ಅಂಧಕಾರ! ಬಿರುಗಾಳಿ! ಪ್ರಪಂಚವೆಲ್ಲಾ ಕೊಚ್ಚಿಕೊಂಡು ಹೋದ ಪ್ರಳಯ ಜಲಪ್ರವಾಹ! ಅದರ ವಿರುದ್ಧ ಅಂತಿಮ ಹೋರಾಟದ ಅವ್ಯಕ್ತತೆಯ ಶೂನ್ಯ!

ಆನಂದನಿಗೆ ಸಿಡಿಲೆರಗಿದಂತಾಯಿತು. "ಲಲಿತಾ" ಎಂದೊಮ್ಮೆ ಚೀರಿದ. ಮನಸ್ಸೆಲ್ಲಾ ತೆರವಾಯಿತು. ಇದ್ದಕ್ಕಿದ್ದಂತೆ ನೋವಿನೊಡನೆ ನಂಟು!—ಕಿತ್ತು ತಿನ್ನಲಾರಂಭಿಸಿತು ನೋವು!

ಲಲಿತಳ ಹೆಣವನ್ನು ಸ್ಮಶಾನಕ್ಕೆ ಸಾಗಿಸುತ್ತಿದ್ದರು ಆನಂದ ಮುಂದೆ ಮುಂದೆ ಸಾಗುತ್ತಿದ್ದ. ಕ್ರೂರೀ ಜಗತ್ತನ್ನು ಬಿಟ್ಟು—ಬಲು ಹಿಂದೆ ಬಿಟ್ಟು ದೂರವಾಗಿ ದಿಗ್ದಿಗಂತದಿಂದಾಚೆ ಹೊರಟವನಂತಿತ್ತು ಅವನ ಹೆಜ್ಜೆಯ ಹಿಡಿತ! ಮುಖದಲ್ಲಿ ಕಲ್ಲಿನ ಕಾಠಿಣ್ಯ—ಸಂಕಲ್ಪದ ಸೆಟೆತ! ಜಗತ್ತನ್ನು ಕಂಡು ರೋಸಿ, ವಿಧಿಯೊಡನೆ ಹೆಣಗಾಡಿ ಜೀವನದ ರೂಪನ್ನು ಬದಲಾಯಿಸುವ ಚೈತನ್ಯ ಮಾತ್ರವಿಲ್ಲದೆ ಬರಿಯ ನಿರಾಸೆಯ ಆಸೆ ಮಾತ್ರ ಉಳಿದ ಹುತಾತ್ಮತೆ ಕಣ್ಣಿನಲ್ಲಿ! ಅವನ ಹಿಂದೆಯೇ ಹುಚ್ಚು ಹಿಡಿದಂತಿದ್ದ ಪಾರ್ವತಮ್ಮನವರು—ಭೂತ ಹಿಡಿದವರಂತೆ ತೂರಾಡುತ್ತಾ ಬರುತ್ತಿದ್ದರು ಅವರ ಮುಖ ಶೂನ್ಯಸ್ಮಶಾನವಾಗಿತ್ತು!

ಸ್ಮಶಾನದಲ್ಲಿ ಇನ್ನೊಂದು ಹೆಣ. ಹುಡುಗನಿಗಿನ್ನೂ ೨೦ ವರ್ಷ. ಅವನ ಹೆಣದ ಪಕ್ಕದಲ್ಲಿ ೧೪ ವರ್ಷದ ಸುಂದರ ಹುಡುಗಿ. ಅವಳ ಕಣ್ಣಿನ ನೀಲಿಮೆಯಿಂದ ನಕ್ಷತ್ರಗಳಂತೆ ನೀರುರುಳಿ ಸ್ಮಶಾನದ ಬೂದಿಗೆ ಬಿದ್ದು ಆರಿ ಹೋಗುತ್ತಿತ್ತು.

ಆನಂದನಿಗೆ ತಲೆ ತಿರುಗುತ್ತಿತ್ತು. ಬಾಲ್ಯ ವಿವಾಹಕ್ಕೆ ತನ್ನ ಅಕ್ಕನೊಂದು ಬಗೆಯ ಬಲಿ. ಈ ಹುಡುಗಿಯೊಂದು ಬಗೆಯ ಬಲಿ! ಲಲಿತಳಿಗೆ ಎಳೆತನದಲ್ಲೇ ಹಿಂದೆಂದೂ ಕಂಡು ಕೇಳದ ನರಸಿಂಹಯ್ಯನೊಂದಿಗೆ ಗಂಟು ಬಿದ್ದಿದ್ದಿತು ಆಗ ಎಲ್ಲಾ ಆಟದಂತೆ! ಸ್ನೇಹಿತೆಯರ ಸ್ನೇಹಮಯ ಹಾಸ್ಯ ತಾಯಿ–ಬಂಧು–ಬಳಗದವರ ಸಡಗರ ಮದುವೆಯಾಯಿತೆಂಬ ಹಿಗ್ಗು ಸಂಪ್ರದಾಯವಾಗಿ–ಸಹಜವಾಗಿ ಬಂದ ಹೆಣ್ತನದ ನಾಚಿಕೆ. ಕೊನೆಯದಾಗಿ ಹೊಸ ಜೀವನದ ಆಕಾಂಕ್ಷೆ! ಆದರೆ ಮುಂದೆ–! ಮೈನೆರೆದು ಪ್ರಸ್ತವಾಗಿ ಗಂಡನ ಮನೆಗೆ ಹೋದಾಗಲೂ ಲಲಿತಳಿಗೆ ಎಷ್ಟು ಹಿಗ್ಗು— ತಾನೊಂದು ಮನೆಯ ಸ್ವಾಮಿನಿಯಾಗುವೆ; ಯಜಮಾನಿತಿಯಾಗುವೆನೆನ್ನುವ ಸಂತೋಷ! ಎರಡು ವರ್ಷ ಏನೂ ಕಷ್ಟ ತಿಳಿಯಲಿಲ್ಲ. ಅವಳಿಗಿನ್ನೂ ಹದಿನೈದು ವರ್ಷ. ಆಗಲೇ ಚೊಚ್ಚಲ ಕೂಸು ಹುಟ್ಟಿದುದು. ಆಗಲೂ ಸಂಭ್ರಮ, ಸಡಗರ, ಸಂತೋಷ! ಆ ಮೇಲೆ ಪ್ರಾರಂಭ–ಕೂಸಿನ ಮೇಲೆ ಕೂಸು! ಗಂಡನೆನ್ನಿಸಿಕೊಂಡ ನರಸಿಂಹಯ್ಯ ಅತಿಕಾಮಿ! ಸಂಯಮ ತಿಳಿಯದ ಒರಟು ಮನುಷ್ಯ. ಮೊದಲ ಎರಡು ಮಕ್ಕಳು ಸಾಕಷ್ಟು ಬಲಯುತವಾಗಿಯೇ ಇದ್ದವು. ಆ ಮೇಲೆ ಲಲಿತಳ ಸತ್ವ–ಜೀವ ಹಿಪ್ಪೆಯಾಯಿತು ಆ ಮೇಲಿನ ಮಕ್ಕಳೆಲ್ಲಾ ಎಲುಬಿನ ತುಂಡುಗಳು! ಮಾಂಸದ ಮುದ್ದೆಗಳು! ಲಲಿತಾ ನರಸಿಂಹಯ್ಯನ ಕಾಮುಕ ವೃಷ್ಟಿಯ ಬೆಂಕಿಯಲ್ಲಿ ಹೂವಿನಂತೆ ಬಾಡಿಹೋದಳು. ಎಂತಹ ಕಷ್ಟ! ಯಾರಿಗಾದರೂ ಹೇಳಿಕೊಳ್ಳುವಂತಹ ಕಷ್ಟವೇ? ಲಲಿತಾ ಎಲ್ಲವನ್ನೂ ಮೌನದಲ್ಲಿಯೇ ಸಹಿಸಿಕೊಂಡಿದ್ದಳು. ಐದನೆಯ ಬಾರಿ ಅವಳು ಗರ್ಭಿಣಿಯಾದಾಗ ಚೊಚ್ಚಲಕೂಸು ತೀರಿಕೊಂಡಿತು. ನಾಗವಲ್ಲಿ ಐದನೆಯ ಕೂಸು ಆದಾದ ಮೇಲೆ ಈಗಾಗಲೇ ೬–೭ ತಿಂಗಳಾಗಿ ಮೈಯಿಳಿದು ತೀರಿಕೊಂಡಳು. ಇದಕ್ಕೆ ಯಾರು ಹೊಣೆ? ಕೊರಳಿಗೆ ಕಂಕಣದ ನೇಣುಹಾಕಿದ ತಾಯಿಯೇ? ಕಾಮದ ಕಾವು ತಡೆಯಲಾರದ ಗಂಡನೇ? ದಬ್ಬಾಳಿಕೆಯನ್ನೆದುರಿಸದೆ

ಮೌನದಲ್ಲಿಯೇ ಎಲ್ಲವನ್ನೂ ಸಹಿಸಿಕೊಂಡಿದ್ದು ಬಚ್ಚಿಟ್ಟ ಬೇಗೆಯಿಂದ ಬಾಡಿದ ಲಲಿತಳೇ? ಇಲ್ಲವೇ ಅರಳುತ್ತಿರುವ ಹೂಗಳನ್ನು ಮೊಗ್ಗಿನಲ್ಲಿಯೇ ಕತ್ತು ಹಿಸುಕಿ–ಹಿಂಡಿ ಅವುಗಳ ಸಾವಿನಿಂದ ಹಿರಿಹಿರಿ ಹಿಗ್ಗುವ ಸಮಾಜವೇ?–ಇಲ್ಲ; ದುಃಖೀ ಜಗತ್ತನ್ನು ಸೃಷ್ಟಿಸಿದ ವಕ್ರಬುದ್ಧಿಯ ದೇವರೇ?

ಸ್ಮಶಾನದ ದೃಶ್ಯ ಯಾರ ಎದೆಯನ್ನಾದರೂ ನಡುಗಿಸಿ ಬಿಡುತ್ತಿತ್ತು. ಸುತ್ತಲೂ ಕಾಡಿನಂತೆ ಬೆಳೆದಿರುವ ಮರಗಳು. ಯಾರೇನಾದರೂ ತಾನು ಮಾತ್ರ ಸ್ಥಿರವೆನ್ನುವಂತೆ ಭೂತಾಕಾರವಾಗಿ ನಿಂತ ಚಾಮುಂಡಿ ಬೆಟ್ಟ! ಹತ್ತಿರ ದಲ್ಲೆಲ್ಲೂ ಮನುಷ್ಯರ ಸುಳಿವೇ ಇಲ್ಲ. ತುಸು ದೂರ ಆ ಬದಿಗೆ ನಂಜನ ಗೂಡಿಗೆ ಹೋಗುವ ಹಾದಿ! ಸ್ಮಶಾನದ ಈ ಪಕ್ಕಕ್ಕೊಂದು ಕಲ್ಲು ಮುಳ್ಳು ಗಳ ಹಾದಿ–ಜೀವನದ ಹಾದಿಯಿದು ಎನ್ನುವಂತಿತ್ತು! ಪಕ್ಕದಲ್ಲೇ ಹದ್ದಿನ ಗುಂಪು–ಅದರ ಕಚ್ಚಾಟ, ಕಿರಲಾಟ! ಅರ್ಧ ಉರುಳಿದ ಮೋಟುಗೋಡೆ, ಅರೆಬೆಂದ ಶವಗಳ ದುರ್ವಾಸನೆ! ಮೂಲೆಯಲ್ಲಿ ಕಾವಲುಗಾರನ ಮುರುಕು ಮನೆ. ಆ ಸಾವಿನ ಮನೆಯ ಕೆಂಗೋಡೆಯ ಪಕ್ಕದಲ್ಲಿ ಅರೆ ಉರಿದ ಸೌದೆಯ ತುಂಡುಗಳು, ಬೆರಣಿಯ ರಾಸಿ ಒಟ್ಟಿತ್ತು. ಅದು ಕಾವಲುಗಾರ ತನ್ನ ಅಡಿಗೆ ಗಾಗಿ ಶವಗಳ ಚಿತೆಯಿಂದ ಕಿತ್ತುಕೊಂಡಿದ್ದ ಆಹುತಿ! ಕಾವಲುಗಾರನ ಮುರುಕು ಮನೆಯ ಬಾಗಿಲು ಅರ್ಧ ತೆರೆದಿತ್ತು. ಒಳಗಿದ್ದ ಕರಿಯ ಮಡಿಕೆ ಹೊರಗಿಣುಕುತ್ತಿತ್ತು. ಅದರ ಕಪ್ಪುದೇಹದ ಮೇಲಿನ ಒಂದೆರಡು ಬಿಳಿಯ ಅಗಳು:—ಅನ್ನ–ಅಂಧಕಾರದಲ್ಲಿನ ಆಸೆಯಂತೆ ತೋರುತ್ತಿದ್ದುವು.

ನರಸಿಂಹಯ್ಯನವರು ಕೂಡ ಈ ದೃಶ್ಯ ಕಂಡು ತಲ್ಲಣಿಸಿದರು. ತಾವು ಎಷ್ಟೇ ತೊಂದರೆ ಕೊಟ್ಟಿದ್ದರೂ ಎಷ್ಟೇ ಪಶುವಿನಂತೆ ನಡೆದುಕೊಂಡಿದ್ದರೂ ಹೆಂಡತಿಯೆನ್ನುವ ವಸ್ತು ಸ್ಮಶಾನದಲ್ಲಿ ಸಾವಿನ ಉಡಿಯಲ್ಲಿ ಮಾಯವಾಗು ವುದು ಕಂಡು ಅವರಿಗೂ ಎದೆ ಮಿಡುಕಿತು. ಅವರ ಕಣ್ಣಿನಿಂದ ಎರಡುಹನಿ ಕಣ್ಣೀರು ಉರುಳಿ ಸ್ಮಶಾನದ ಬೂದಿಯಮೇಲೆ ಬಿದ್ದಿತು ಕೊಂಚ ಬೂದಿ ಚಿಮ್ಮಿ ಲಲಿತಳ ಚಿತೆಯ ಮೇಲೆ ಹಾರಿತು. ಅದರಿಂದಲೇ ಅವಳಿಗೆ ತೃಪ್ತಿ ಯಾಯಿತೋ–ಏನೋ–ಚಿತೆಯ ಉರಿ ಕೊಂಚಕೊಂಚವಾಗಿ ಆವರಿಸುತ್ತಿದ್ದ ಅವಳ ಮುಖದ ಮೇಲೆ ಹಿಂದೆಂದೂ ಕಾಣದ ಒಂದು ನೀರವತೆ ನಿದ್ರಿಸಿತ್ತು!

× × × × ×

ಪಾರ್ವತಮ್ಮನವರು ತೆಪ್ಪಗೆ ಮೂಲೆ ಹಿಡಿದಿದ್ದರು. ಮೌನದ ಭೂತ ಅವರನ್ನಾಕ್ರಮಿಸಿದಂತಿತ್ತು. ಒಂದೊಂದು ನಿಮಿಷ ಈ ಮೌನದ ಭೀಷಣತೆಯನ್ನು ಛೇದಿಸಿಕೊಂಡು ಗೋಳಾಟ,–ಮತ್ತೆ ಮೌನ–ಸ್ಮಶಾನಮೌನ ಹೃದಯದ ದುಃಖದ ಭಾರದಿಂದ ಮುಖ ತಗ್ಗಿತ್ತು. ಸುಮ್ಮನೆ ಕಣ್ಣಿನಿಂದ ಪ್ರವಾಹ ಹರಿಯುತ್ತಿತ್ತು.

ಇದ್ದಕ್ಕಿದ್ದಂತೆ ನಾಗವಲ್ಲಿ ಅಳಲಾರಂಭಿಸಿದಳು. ತಾಯಿಯನ್ನು ಕೂಗುಲಾರಂಭಿಸಿ ಹಟ ಹಿಡಿದಳು ಪಾರ್ವತಮ್ಮನವರ ದುಃಖ ಕಟ್ಟೆಯೊಡೆಯಿತು.

"ಅಯ್ಯೋ ಎಳೆಯ ಕೂಸನ್ನು ಬಿಟ್ಟು ಹೋದಳೇ! ಎಂತಹ ರತ್ನದಂತಹ ಮಗಳು! ಅಬ್ಬ! ದೇವರೇ! ಈ ಸಂಕಟ ತಡೆಯಲಾರೆ! ಅಯ್ಯೋ!"

ಪಾರ್ವತಮ್ಮನವರ ಎದೆಯ ಉರಿ ಮೌನದ ಮಹಾಪಾತಾಳದಲ್ಲಿ ಹುದುಗಿ ಹೋಗುತ್ತಿತ್ತು!

ಆನಂದ ತಾನೆಲ್ಲಿಗೆ ಹೋಗುತ್ತಿರುವೆನೆಂಬ ಅರಿವೇ ಇಲ್ಲದೆ ಸುಮ್ಮನೆ ಸಾಗುತ್ತಿದ್ದ. ಮುಖದಲ್ಲಿ ಕಟುತ್ವ, ಹೃದಯದಲ್ಲಿ ನೋವಿನ ಪರಿಪೂರ್ಣತೆ! ಕಾಲು ಸುಸ್ತಾಗಿ ತಾವಾಗಿ ನಿಲ್ಲುವ ವರೆಗೂ ನಡೆದ. ಕೊನೆಗೆ ಅವನು ಬಂದಿದ್ದುದು ಸ್ಮಶಾನಕ್ಕೇ! ಅದೇಕೊ ಏನೋ ಸ್ಮಶಾನದೊಳಕ್ಕೆ ಹೋಗಲು ಮತ್ತೆ ಮನಸ್ಸಾಗಲಿಲ್ಲ ಕಾಲಿಗೆಲ್ಲ ಮುಳ್ಳು ಚುಚ್ಚಿತ್ತು. ಅಲ್ಲಿಯೇ ನೆಲದ ಮೇಲೆ ಕುಸಿದುಬಿದ್ದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ. ಇದೆಲ್ಲದರ ಅರಿವಿಲ್ಲದೆ ಕಾವಲಗಾರ ತನ್ನ ಮುರುಕು ಮನೆಯಲ್ಲಿ ಸಂತೋಷವಾಗಿ ಹಾಡುತ್ತ ಊಟಕ್ಕೆ ಸಿದ್ಧಪಡಿಸಿಕೊಳ್ಳುತ್ತಿದ್ದ!

ಆನಂದನ ಮನಸ್ಸು ಶೂನ್ಯದಿಂದ ನೋವಿಗೆ ಇಳಿದಿತ್ತು. ಕೊಂಚ ಕೊಂಚವಾಗಿ ಸುತ್ತಲಿನ ಜಗತ್ತು ಮನಸ್ಸಿಗೆ ಮುಸುಕು ಮುಸುಕಾಗಿ ಅರಿವಾಗುತ್ತ ಬಂತು ಎದೆಯಲ್ಲಿ ಏನೋ ಒಂದು ಬಗೆಯ ನೋವು, ಯಾತನೆ–ಪೆಟ್ಟು ಬಿದ್ದು ರಕ್ತ ಹರಿಯುತ್ತಿದ್ದಂತೆ–!

ಒಂದು ವಿಶ್ವಾಸದ ವ್ಯಕ್ತಿಯ ಸಾವಿನಿಂದ ಜಗತ್ತೆಲ್ಲಾ ತೆರವಾಗುತ್ತದೆ ಸರ್ವಸ್ವವೂ ಶೂನ್ಯವಾಗುತ್ತದೆ. ಇಲ್ಲವಾಗುತ್ತದೆ.

# ೧೪

ರಾಮು ಪರೀಕ್ಷೆಯಿಂದ ಮನೆಗೆ ಹಿಂತಿರುಗಿದೊಡನೆಯೇ ಆನಂದನ ಪತ್ರ ಸಿಕ್ಕಿತು. ಆ ದಿನ ಪರೀಕ್ಷೆಯಲ್ಲಿ ಅಷ್ಟೇನೂ ಚನ್ನಾಗಿ ಬರೆಯದಿದ್ದರೂ ತೇರ್ಗಡೆಯೇನೋ ಆಗುವದೆಂದು ಭರವಸೆ ಇತ್ತು. ಆನಂದನ ಕಾಗದ ಸಿಕ್ಕಿದೊಡನೆಯೇ ಪರೀಕ್ಷೆಯ ಯೋಚನೆ ಮಾಯವಾಯಿತು. ಕೂಡಲೇ ಬಹಳ ಆಸಕ್ತಿಯಿಂದ ಆನಂದನ ಪತ್ರವನ್ನೆತ್ತಿ ಓದಲಾರಂಭಿಸಿದ. ಆನಂದ ಮೈಸೂರಿನಲ್ಲೇ ಏನೋ ಹೇಳಬೇಕೆಂದಿದ್ದವನು ಬಾಯಿಬಿಟ್ಟು ಹೇಳಿರಲಿಲ್ಲ ತಾನೂ ಮುಂದಾಗಿ ಕೆಣಕಿ ಕೇಳಿರಲಿಲ್ಲ ಈಗ ಏನು ಬರೆದಿರುವನೋ ಎಂದು ವಿಪರೀತ ಕುತೂಹಲ.

“ ಪ್ರಿಯ ರಾಮು,

ನೀನೇನೋ ಆ ದಿನ ಊರಿಗೆ ಹೊರಟುಹೋದೆ. ಆದರೆ ನನ್ನ ಮನಸ್ಸಿನ ಮಾತು ಅಲ್ಲಿಯೇ ನಿಂತುಹೋಗಿತ್ತು. ನೀನು ನನ್ನ ಜತೆಯಲ್ಲಿದ್ದಾಗ ನಿನಗೆ ಅದನ್ನು ಹೇಳಬೇಕೆಂದು ನಾನು ಬಹಳ ಪ್ರಯತ್ನಪಟ್ಟೆ. ಆದರೆ ಎಷ್ಟೇ ಪ್ರಯಾಸಪಟ್ಟರೂ ಮಾತೇ ಬರುತ್ತಿರಲಿಲ್ಲ. ನೀನೇನು ಬೇಕಾದರೂ ಅಂದುಕೊಳ್ಳಬಹುದು. ನನ್ನೆದೆಯ ಭಾವತರಂಗವನ್ನೆಲ್ಲಾ ನಿನ್ನ ಮುಂದೆ ಬಿಚ್ಚಿಡುತ್ತಿದ್ದೇನೆ. ನೀನೇನು ಬೇಕಾದರೂ ತಿಳಿದುಕೋ.

ನಿನಗೆ ನೆನಪಿರಬೇಕು. ಆಕೆಯ ವಿಚಾರ—ಅನುವಿನದು! ಆಕೆಯ ನೆನಪು ಮನಸ್ಸನ್ನು ಒಂದೇ ಸಮನಾಗಿ ಆಕ್ರಮಿಸಿ ಹೇಗಾದರೂ ಸರಿ, ಆಕೆಯನ್ನೊಂದು ಬಾರಿ ನೋಡಬೇಕೆನ್ನಿಸಿತು ಆಕೆಯನ್ನು ನೆನೆದಾಗಲೆಲ್ಲಾ ಮೈಯೆಲ್ಲಾ ಏನೋ ಒಂದು ಬಗೆಯಾಗುತ್ತಿತ್ತು. ಮನಸ್ಸಿಗೇನೋ ಸಮಾಧಾನ! ಎಷ್ಟೆಷ್ಟು ಪ್ರಯತ್ನಪಟ್ಟರೂ ಅನುವನ್ನು ಮರೆಯಲಾಗಲಿಲ್ಲ. ಹೋಗಿ ಅವಳನ್ನು ಕಂಡುಬರುವ ಆಸೆಯನ್ನು ನಿವಾರಿಸಲೂ ಆಗಲಿಲ್ಲ. ಇದನ್ನು ಹುಚ್ಚೆನ್ನುವಿಯೋ ಏನೋ! ಆದರೆ ಇದ್ದುದನ್ನು ಇದ್ದಂತೆ ಹೇಳಿದ್ದೇನೆ.

ಮರುದಿನವೆಲ್ಲಾ ಒದ್ದಾಟ. ನನಗೆ ಏನೂ ಬೇಕೇ ಆಗುತ್ತಿರಲಿಲ್ಲ. ಕಾಲೇಜಿನ ಬಳಿಯಾದರೂ ಹೋಗಿ ಒಮ್ಮೆ ಅನುವನ್ನು ನೋಡಿಬರುವ ಆಸೆ.

ಹೇಗೋ ಅಂತೂ ಅವಳನ್ನೊಂದು ಬಾರಿ ನೋಡಿದರೆ ಸಾಕೆಂದು ಮನಸ್ಸು ಒದ್ದಾಡುತ್ತಿತ್ತು. ಮನಸ್ಸು ಬಿಗಿ ಹಿಡಿಯುವುದು ಬಹಳ ಕಷ್ಟವಾಯಿತು· ರಾಮು, ಎಲ್ಲಿ ಹೋದರೂ ಅನುವಿನ ಆಕೃತಿ, ಅನುವಿನ ರೂಪ, ಅನುವಿನ ನಗೆಮುಖ—ಹೇಗೆ ತಿರುಗಿದರೂ ಈ ಒಳಗಣ್ಣಿಗೆ ಅವಳೇ ಕಾಣುತ್ತಿದ್ದಳು ಅದರಿಂದ ಬಿಡುಗಡೆಯಾಗುವುದು ಹೇಗೆಂದು ನನಗೆ ತಿಳಿಯಲೇ ಇಲ್ಲ.

ಅಂದು ಸಂಜೆ ನಾನು ಲಲಿತಳ ಜತೆಯಲ್ಲಿ ಸಿನಿಮಾಕ್ಕೆ ಹೋಗುತ್ತಿದ್ದೆ. ಆಗ ಒಂದು ಕಡೆ ತಿರುವಿನಲ್ಲಿ ಅನಿರೀಕ್ಷಿತವಾಗಿ ಅನುವಿನ ಕೈ ನನ್ನ ಕೈಗೆ ತಗಲಿತು. ನನಗೆ ಎದೆ ತುಂಬಿಬಂತು—ಮೈ ಬೆವರಿತು! ಅನುವಿನ ಮುಖ ನೋಡಿದೆ—ಅದೂ ಒಂದು ನಿಮಿಷ ಮಾತ್ರ! ನೋಡಿದವರನ್ನು ಒಮ್ಮೆಗೇ ಸೆಳೆಯುವ ಆ ಕಣ್ಣುಗಳು ಸಂಜೆಯ ಕಿರಣಗಳಲ್ಲಿ ಹೊಳೆಯುತ್ತಿದ್ದುವು. ಮುಖ ಕೆಂಪೇರಿತ್ತು. ನನ್ನ ಮನಸ್ಸು ನನ್ನ ಕೈಯಲ್ಲುಳಿಯದೆ ಅನುವಿನೊಂದಿಗೇ ಓಡಿ ಹೋಯಿತು. ಆಕೆ ಏನೆಂದುಕೊಂಡಳೋ ಏನೋ! ನಾನಂತೂ "ಕ್ಷಮಿಸಿ" ಎಂದೆ. ಅನು ಮಾತ್ರ ಏನೂ ಮಾತನಾಡದೆ ಹೊರಟು ಹೋದಳು.

ಇಂದಿನ ವಿಚಾರ ಹೇಳಬೇಕು, ರಾಮು! ಇಂದು ಬೆಳಿಗ್ಗೆ ಅನುವಿನ ಸಹಪಾಠಿ ರಾಜು ನಮ್ಮ ಮನೆಗೆ ಬಂದಿದ್ದ. ಅವರಿಗೆ ಈ ದಿನ ಪರೀಕ್ಷೆ ಮುಗಿಯುವುದು ಅದಕ್ಕಾಗಿ ಎಲ್ಲರೂ ಇನ್ನು ಊರಿಗೆ ಹೊರಟು ಹೋಗುವವರಲ್ಲಾ—ಅದಕ್ಕೆ ಮೊದಲು ಸಂಜೆ ಒಂದು ಸಂತೋಷಕೂಟ ಸೇರಬೇಕೆಂದು ಅವರೆಲ್ಲರೂ ತೀರ್ಮಾನಿಸಿಕೊಂಡಿದ್ದರಂತೆ. ರಾಜುವಿಗೇನು ತೋರಿತೋ—ಏನೋ ಅಂತೂ ನನ್ನನ್ನು ಅಲ್ಲಿಗೆ ಬರಲೇಬೇಕೆಂದು ಒತ್ತಾಯ ಮಾಡಿದ. ನನಗೆ ಹೋಗಬಾರದೆಂದು ಅರ್ಧ ಮನಸ್ಸು; ಆದರೆ ಹೋಗದಿದ್ದರೆ ಅನುವನ್ನು ಮತ್ತೊಮ್ಮೆ ಕಾಣುವ ಅವಕಾಶ ಹಾಳಾಗುವುದಲ್ಲಾ ಎಂದು ಹೃದಯ ಹೊಡೆದುಕೊಳ್ಳಲಾರಂಭಿಸಿತು ಕೊನೆಗೆ ಮನಸ್ಸನ್ನು ಬಿಗಿ ಹಿಡಿಯಲಾರದೆ ಒಪ್ಪಿಕೊಂಡೆ.

ಸಂತೋಷ ಕೂಟ ಸೊಗಸಾಗಿತ್ತು. ಸೂರ್ಯನ ತಾಪವೇನೂ ಹೆಚ್ಚಾಗಿರಲಿಲ್ಲ. ವಿದ್ಯಾರ್ಥಿಗಳಲ್ಲಿ ಮುಕ್ಕಾಲು ಭಾಗ ಎಲ್ಲರೂ ಮನೆಗೆ ಹೊರಟು ಹೋಗಿದ್ದರು. ಆದುದರಿಂದ ಅಲ್ಲೇನೂ ಅಂತಹ ಗಲಾಟೆಯಿರಲಿಲ್ಲ. ಮೋಡಗಳು ಸೂರ್ಯನ ಕಿರಣಗಳಲ್ಲಿ ಬೆಳ್ಳಿಯವಾಗಿ ಹಾರಾಡುತ್ತಿದ್ದವು. ಗಿಡಮರ

ಗಳೆಲ್ಲಾ ಮೌನವನ್ನವಲಂಬಿಸಿದ್ದುವು. ಎಲ್ಲೆಲ್ಲಿಯೂ ಮೌನ-ನಿಶ್ಯಬ್ದ-ನೀರವತೆ! ಆಗಾಗ ಒಂದೊಂದು ಕಾಗೆಯ "ಕಾ, ಕಾ" ಕೂಗು, ಹೋಟಲಿನ ಮಾಣಿಗಳ ಕೂಗಾಟ, ಅಯ್ಯರ್ ಮನೆಯ ಬಡಕಲು ನಾಯಿಯ ಹಸಿವಿನ ಅಳು, ಮರದೆಲೆಗಳು ಗಾಳಿಯಲ್ಲಿ ಅಲೆದಾಡುವ ಸರಪರ ಶಬ್ದಗಳಲ್ಲದೆ ಮತ್ತಾವ ಶಬ್ದವೂ ಇರಲಿಲ್ಲ. ನಿಸರ್ಗದಲ್ಲಿ ನೀರವತೆ ಮೂಡಿತ್ತು ನಮ್ಮ ಕೂಟದಲ್ಲಿಯೂ ಒಂದು ರೀತಿಯ ಶಾಂತಿ!

ನಾನು ಹೋಗುವ ವೇಳೆಗಾಗಲೇ ಎಲ್ಲರೂ ಬಂದಿದ್ದರು ನನ್ನ ನಮಸ್ಕಾರಕ್ಕೆ ಎಲ್ಲರೂ ಪ್ರತಿ ನಮಸ್ಕಾರ ಮಾಡಿದರು. ರೋಮಾಂಚದಿಂದ ನನ್ನ ಮೈ ನಡುಗುತ್ತಿತ್ತು. ಬೆವರು ಧಾರೆಯಾಗಿ ಹರಿಯಿತು. ಹಾಗೂ ಹೀಗೂ ಹೊಡೆದುಕೊಳ್ಳುತ್ತಿದ್ದ ಹೃದಯವನ್ನು ಸಮಾಧಾನಗೊಳಿಸಿ ಕುರ್ಚಿಯೊಂದನ್ನೆಳೆದುಕೊಂಡು ಕುಳಿತೆ. ಕೂಟದಲ್ಲಿ ಸಂದಿಗ್ಧ ಮೌನ! ಆದರೆ ಮೋಡಗಳ ಮರೆಯಿಂದ ಒಮ್ಮೊಮ್ಮೆ ಚಿಮ್ಮುವ ಮಿಂಚಿನ ಲಹರಿಯಂತೆ ಮೌನದ ಪದರದ ನಡುವೆ ಹಾಸ್ಯಲಹರಿ ಒಮ್ಮೊಮ್ಮೆ ತೂರಿ ತೇಲಿ ಬರುತ್ತಿತ್ತು ಮತ್ತೆ ಅದೇ ಮೌನ, ಅದೇ ಶಾಂತತೆ, ಅದೇ ನೀರವತೆ!

ನನ್ನ ಮನಸ್ಸು ಕೊಂಚವಾದರೂ ಶಾಂತವಾಗಿರಲಿಲ್ಲ! ಚಿಂತೆ, ಕಳವಳ, ಕಾತರಗಳ ಗೂಡಾಗಿತ್ತು ಹೃದಯ ಅನುವನ್ನೇ ನೋಡುತ್ತಿರಬೇಕೆಂದು ಆಸೆ ಆದರೆ ಎಲ್ಲರೂ ಕುಳಿತಿರುವರು. ಎಲ್ಲರೂ ನನ್ನನ್ನೇ ನೋಡುತ್ತಿರುವರು ಎಲ್ಲಿಯಾದರೂ ಯಾರಾದರೂ ನೋಡಿ ಬಿಡಬಹುದೆಂಬ ಶಂಕೆ! ಆದರಿಂದ ಆಗಾಗ ಕದ್ದು ಆಕೆಯ ಕಡೆಗೆ ಕುಡಿನೋಟ ಬೀರುತ್ತಿದ್ದೆ.

ಆಕೆಯನ್ನು ನಾನು ಮೊದಲುಬಾರಿ ಕಂಡಾಗ ಉಟ್ಟಿದ್ದಂತಹ ಕಪ್ಪು ಸೀರೆಯನ್ನೇ ಉಟ್ಟಿದ್ದಳು. ಹಸನಾಗಿ—ಹದನಾಗಿ—ಹವಣರಿತು ಮಡಿಸಿ ಉಟ್ಟಿದ್ದುದರಿಂದ ಅನುವಿನ ಸೊಬಗಿಗೊಂದು ಮೆರಗು ಕೊಟ್ಟಿತ್ತು. ರವಿಕೆ ಮುಗಿಲುಬಣ್ಣದ್ದು. ಮುಗಿಲಿನಷ್ಟೇ ಸುಂದರವಾಗಿ ಭಾವಗರ್ಭಿತವಾಗಿತ್ತು. ಆಕೆಯ ನೀಲವರ್ಣದ ಕಣ್ಣುಗಳ ಆಳವನ್ನು, ಆಕೆ-ಮುಡಿದಿದ್ದ ಮಲ್ಲಿಗೆಯ ಸುವಾಸನೆಯನ್ನೂ ಅಳೆಯುವುದು ಒಂದೇ! ಅನು ನಕ್ಕಾಗಲೆಲ್ಲ ನನ್ನ ಹೃದಯ ಅರಳುತ್ತಿತ್ತು. ಅವಳು ಮಾತನಾಡಿದರೆ ಸಾಕೆಂದು ಮೈಯೆಲ್ಲಾ ಕಿವಿಯಾಗಿತ್ತು. ಒಂದು ಸಾರಿ ಯಾರೋ ಅವಳನ್ನು ಅವಳ ಅಡ್ಡಹೆಸರಿನಿಂದ

ಕರೆದುಬಿಟ್ಟರು. ಆಗ ಅನುವಿನ ಮುಖ ನೋಡಬೇಕಾಗಿತ್ತು. ನಾಚಿಕೆಯಿಂದ ಕತ್ತನ್ನು ಕೊಂಚ ಕೊಂಕಿಸಿದ್ದಳು. ಕೆನ್ನೆ ಗುಲಾಬಿಯಾಯಿತು. ಎಣ್ಣೆಗೆಂಪಿನ ಮೇಲೆ ಪಾಲ್ಕಿನೆಯ ಲೇಪನ ಕೊಟ್ಟಂತೆ, ಬಿಳಿ ಗುಲಾಬಿಯಲ್ಲಿ ಸಂಜೆ ಸೂರ್ಯನ ಕೆಂಪು ನಿದ್ರಿಸಿದಂತೆ ಮುಖ ಹೊಳೆಯುತ್ತಿತ್ತು. ಆಗ ಅನುವಿನ ಕಣ್ಣುಗಳ ಸೆಳೆತ! ಅವಳ ಸೌಂದರ್ಯ! ಅದನ್ನು ಕಂಡು ಅನುಭವಿಸ ಬೇಕು. ರಾಮು, ವರ್ಣಿಸುವುದಂತೂ ಅಸಾಧ್ಯ! ಗುಲಾಬಿಯ ಸೌಂದರ್ಯ ಬಣ್ಣನೆಯ ಬಣ್ಣಕ್ಕೆ ನಿಲುಕುವುದೇ?

ಏನೇನೋ ಮಾತಾಡುತ್ತಾ ಸೆರೆಮನೆಯ ಜೀವನದ ಮಾತು ಬಂತು. ಆಗ ಅನು ನನ್ನ ಕಡೆ ತಿರುಗಿ ನನ್ನನ್ನೊಂದು ಪ್ರಶ್ನೆ ಕೇಳಿಬಿಟ್ಟಳು. ನನ್ನ ದನಿ ಒಮ್ಮೆಗೇ ಇಳಿದು ಹೋಯಿತು. ಬಹಳ ಪ್ರಯಾಸದಿಂದ ಉತ್ತರಕೊಟ್ಟೆ. ನಾನು ಉತ್ತರ ಕೊಡುವಾಗ ಕತ್ತನ್ನು ಮೇಲೆತ್ತಲೇ ಇಲ್ಲ. ಆದರೂ ಅನು ನನ್ನ ಕಡೆಯೇ ನೋಡುತ್ತಿರುವಳೆಂದು ನನಗನ್ನಿಸಿತು, ಒಮ್ಮೆ ಹಾಗೂ ಕತ್ತೆತ್ತಿ ನೋಡಿದೆ— ಅದೆಂತಹ ಮೋಹಕ ದೃಷ್ಟಿ! ಒಂದೇ ಬಾರಿಗೆ ನನ್ನೆಲ್ಲ ವನ್ನು ತನ್ನದಾಗಿಸಿಕೊಂಡಳು. ಮತ್ತೆ ಅವಳ ಕಡೆಗೆ ನೋಡಲಂತೂ ನನಗೆ ಆಗಲೇ ಇಲ್ಲ. ಆದರೆ ಹೃದಯದಲ್ಲಿ ಮಾತ್ರ ಕಡಲಿನಂತಹ ಆಸೆ!

ಕೊನೆಯಲ್ಲಿ ಎಲ್ಲರೂ ಬೀಡಾ ತರಿಸಿ ಹಾಕಿಕೊಂಡೆವು. ಅನುವಿನ ತುಟಿ ಎಲ್ಲರ ತುಟಿಗಿಂತಲೂ ಬಹಳಬೇಗ ಹೆಚ್ಚುಕೆಂಪಾಯಿತು. ಅವಳ ಕೆಂಪು ತುಟಿ ನೋಡಿದಾಗ ನಿನ್ನ ಮಾತುಗಳು ನೆನಪಿಗೆ ಬಂದವು.— "ತುಟಿ ಬಹಳ ಬೇಗ ಕೆಂಪಾಗುವವರಲ್ಲಿ ಪ್ರೀತಿ ಬಹಳ" ಎಂದು. ಆಗ ಮನಸ್ಸಿನಲ್ಲಿ ಹಿಂದೆ ಕಾಣದ ಅವ್ಯಕ್ತ ಆಸೆಯೊಂದು ಕುದುರಿತು.

ಹೊರಡುವಾಗ ಆಕೆ ನನಗೂ ನಮಸ್ಕರಿಸಿದಳು ಕೊಂಚ ದೂರ ನಡೆದು ಅಂದಿನ ನನ್ನ ಉದ್ಧತ ಮಾತುಗಳಿಗೆ ಕ್ಷಮೆ ಬೇಡಿದೆ. ಆಗ ಅನು ವಿನ ಮಾತೆಷ್ಟು ಸಮಾಧಾನಕರವಾಗಿತ್ತು ಗೊತ್ತೇ?—

"ನಾನು ಆ ದಿನವೇ ಆ ಮಾತನ್ನು ಮರೆತುಬಿಟ್ಟೆ. ಆಗ ನನ್ನಿಂದಲೂ ತಪ್ಪಾಯಿತು. ನಾನೂ ಏನೇನೋ ಅಂದುಬಿಟ್ಟೆ. ನನ್ನಿಂದ ನಿಮಗೆ ನೋವಾ ಗಿದ್ದರೆ ಕ್ಷಮಿಸಿ."

ಅನುವಿನ ಈ ಮಾತಿನಿಂದ ನನ್ನ 'ಮನಸ್ಸು ಸಮಾಧಾನಗೊಂಡಿತು ಅವಳು ನಗುನಗುತ್ತ ಹೊರಟುಹೋದಳು. ಆ ಮಧುರ ನಗೆಯಲ್ಲಿ ನನ್ನ ಹೃದಯವೂ ತೇಲಿ ಹೋದಂತಾಯಿತು.

ನಾಳೆ ನನ್ನ ಹುಟ್ಟಿದಹಬ್ಬ! ನಿನಗೆ ಪರೀಕ್ಷೆ ಚೆನ್ನಾಗಿ ಓದಿಕೊಂಡಿರುವೆ ತಾನೇ? ಪರೀಕ್ಷೆಯಾದೊಡನೆ ಬಂದುಬಿಡು ಒಂದಿಷ್ಟು ದಿನ ಜತೆಯಲ್ಲಿ— ಹಳ್ಳಿಯಲ್ಲಿ ಹಾಯಾಗಿ ಕಾಲ ಕಳೆಯೋಣ.

ಲಲಿತ, ಅಮ್ಮ ಎಲ್ಲರೂ ಸೌಖ್ಯವಾಗಿದಾರೆ. ನಾಳೆ ನನಗೆ ಜನ್ಮದಿನೋತ್ಸವ ನಡೆಸಲು ಲಲಿತಳಿಗಂತೂ ಸಡಗರವೇ ಸಡಗರ! ಈಗ ಪೇಟೆಗೆ ಹೋಗಿದ್ದಾರೆ ಇಬ್ಬರೂ. ಸಾಮಾನು ತರಬಹುದೆಂದು ತೋರುತ್ತದೆ. ಎಂತಹ ಅಕ್ಕ ರಾಮು! ಜನ್ಮಜನ್ಮಗಳಲ್ಲಿಯೂ ಇಂತಹ ಅಕ್ಕನೇ ಸಿಕ್ಕಿದರೆ!

ಈಗ ತಾನೇ ಒಂದು ಕವಿತೆ ಬರೆದೆ ಅದೇಕೆ ಬರೆದೆನೆಂಬುದು ನನಗೇ ತಿಳಿಯದು. ಆದರೆ ಅದನ್ನು ಬರೆಯುವ ಮುನ್ನ ಮಾತ್ರ ಬಹಳ ಹಿಗ್ಗಾಗಿತ್ತು, ಈ ಪತ್ರ ಬಂದುದಕ್ಕೆ ನಿನ್ನಿಂದ ಉತ್ತರ ಬೇಗನೆ ಬರಲಿ.

ನಿನ್ನ ಪ್ರಿಯ
**ಆನಂದ**"

ರಾಮು ಪತ್ರವನ್ನು ಜೇಬಿನಲ್ಲಿರಿಸಿ ಕವಿತೆಯನ್ನೋದಿಕೊಂಡ. ನಸುನಗೆಯೊಂದು ತುಟಿಯ ಮೇಲೆ ಸುಳಿಯಿತು. ಪ್ರಪಂಚವನ್ನೇ ದ್ವೇಷಿಸುತ್ತಿದ್ದವನು ಈಗ ವಿಶ್ವಾಸದ ಬೆಲೆ ತಿಳಿದು ತಾನೇ ಪ್ರೇಮದ ತೆಕ್ಕೆಯಲ್ಲಿ ಬಿದ್ದಿರುವನೆಂದರೆ ಸೋಜಿಗವೇ ಸರಿ! ಸದ್ಯ—ತಾಯಿ ಅಕ್ಕ ಇಬ್ಬರೂ ತನ್ನನ್ನು ದ್ವೇಷಿಸುವರೆಂದಿದ್ದವನು ಕೊನೆಗಾದರೂ ಅವರ ಮಮತೆ, ಪ್ರೇಮಗಳ ಬೆಲೆಯನ್ನು ಅರಿತನಲ್ಲಾ ಎಂದು ಸಂತೋಷಗೊಂಡ ರಾಮು. ಇದೂ ಅಲ್ಲದೆ ಅನುವಿನಲ್ಲಿ ಬೇರೆ ಅನುರಾಗ ಆನಂದನಿಗೆ. ಅನುವಿನಲ್ಲಿ ಅನುರಾಗವಿದೆಯೆಂಬುದಂತೂ ನಿಸ್ಸಂದೇಹ ವಿಚಾರ! ಹಿಂದೆಯೇ ಅವರ ಮೊತ್ತಮೊದಲ ಭೇಟಿಯ ವಿಚಾರ ಕೇಳಿದಾಗಲೇ ರಾಮುವಿಗೆ ಕೊಂಚ ಅನುಮಾನವಾಗಿತ್ತು. ಪ್ರಥಮ ಪರಿಚಯದಲ್ಲಿಯೇ ತಂಗಾಳಿ ಬೀಸಿ ಪ್ರೇಮ ಅವರಿಬ್ಬರ ಜುಂಗನ್ನು ಹಿಡಿದಿತ್ತು. ಆ ಮೇಲೆ ಆನಂದ ಸೆರೆಮನೆಯಿಂದ ಬರೆದ ಪತ್ರ. ಆನಂದನಲ್ಲಿ

ಕಂಡುಬಂದ ಅಪಾರ ಬದಲಾವಣೆಗಳಿಂದ ಈ ಅನುಮಾನ ಬಲವಾಗಿ ಈಗಂತೂ ಅದು ಖಚಿತವಾಗಿತ್ತು.

" ಸದ್ಯ ಈ ಸ್ಥಿತಿಗೆ ಬಂದನಲ್ಲಾ ಆನಂದ ಅವನ ಪ್ರೇಮ ಪೋಳಿಯಲಿ" ಎಂದು ರಾಮು ಹಾರೈಸಿದ.

ಕಾಫಿ ಕುಡಿದು ಕೊಂಚ ಸುಧಾರಿಸಿಕೊಳ್ಳುವುದರಲ್ಲಿಯೇ ಆನಂದನಿಂದ ತಂತಿ ಬಂತು. ರಾಮುವಿಗೆ ದಿಕ್ಕೇ ತೋಚದಂತಾಯಿತು. ಈ ಅನಿರೀಕ್ಷಿತ ದುರಂತವನ್ನು ನಂಬಲೇ ಸಾಧ್ಯವಾಗದು. ಆದರೆ— !

ಮರುದಿನದಿಂದ ರಾಮು ಪರೀಕ್ಷೆಗೆ ಹೋಗಿ ಕುಳಿತು ಏನೋ ಬರೆದು ಬಿಟ್ಟು ಬರುತ್ತಿದ್ದ. ಕುಳಿತರೆ ಒಂದೇ ಸಮನಾಗಿ ಯೋಚನೆ. ಏನು ಬರೆಯ ಬೇಕೆಂಬುದೇ ಮರೆತು ಹೋಗುತ್ತಿತ್ತು. ಹೀಗಾಗಿ ಯಾವ ಭಾಗದಲ್ಲಿಯೂ ಚೆನ್ನಾಗಿ ಬರೆಯಲಿಲ್ಲ. ಪರೀಕ್ಷೆ ಮುಗಿದ ತಕ್ಷಣವೇ ಮೈಸೂರಿಗೆ ಹೋಗ ಬೇಕೆಂದಿದ್ದ ಆವರೆ ಮನೆಯಲ್ಲಿ ಅವನ ತಮ್ಮನಿಗೆ ವಿಷಮಶೀತಜ್ವರ ಬಂದು ವಿಪರೀತವಾಯಿತು. ಕೊನೆಗೆ ಅವನನ್ನು ಆಸ್ಪತ್ರೆಗೆ ಸಾಗಿಸಬೇಕಾಯಿತು. ರಾಮುವಿಗೆ ಅದೊಂದು ಹೆಚ್ಚು ಯೋಚನೆ ! ಪ್ರತಿದಿನವೂ ಹಗಲೆನ್ನದೆ ರಾತ್ರಿ ಯೆನ್ನದೆ ಆಸ್ಪತ್ರೆಗೆ ಸುತ್ತಬೇಕಾಗಿತ್ತು. ಅವನಿಗೆ ವಿರಾಮ ಸಿಕ್ಕಿದುದೂ ಉಗಾದಿಯ ದಿನ—ಅದೂ ಎಂತಹ ವಿರಾಮ—ತಮ್ಮನ ಜೀವನದ ಪೂರ್ಣ ವಿರಾಮ !

## ೧೫

ಉಗಾದಿಯಾದ ಮರುದಿನ ಅನಸೂಯಾ ಹಾಸಿಗೆಯ ಮೇಲೆಯೇ ಇನ್ನೂ ಹೊರಳಾಡುತ್ತಾ ಕನಸು ಕಟ್ಟುತ್ತಿದ್ದಂತೆಯೇ ಅಡಿಗೆಯ ಮನೆ ಯಿಂದ ಅವಳ ತಾಯಿ ಕೂಗಿಕೊಂಡು ಬಂದರು.

" ಲೇ ಅನು—ಲೇ ಏಳೇ "

" ಊಂ " ಎಂದು ಅನು ಮುಸುಗುಟ್ಟಿದಳು.

" ಇದೇನೇ ಇದು ನಾಚಿಕೆಗೇಡು—ಹತ್ತು ಗಂಟೆಯಾದರೂ ಹಾಸಿಗೆ ಬಿಟ್ಟೇಳುವಂತಿಲ್ಲ ! ಚೆನ್ನಾಯಿತು ಕಣೇ ! ಕಾಫಿಯೆಲ್ಲಾ ಆರಿಹೋಯಿತಲ್ಲೇ ! ಆ ಮೇಲೆ ನನ್ನ ಮೇಲೆಯೇ ರೇಗುವುದು. "

"ಹೋಗಲಿ ಬಿಡೇ ಅಮ್ಮ. ಎಷ್ಟು ಹೊತ್ತಿಗೆದ್ದರೇನೇ—ಕಾಲೇಜಿಗಂತೂ ರಜಾ ಇದೆ. ಕಾಲೇಜಿದ್ದಾಗಲಂತೂ ಬೇಗ ಏಳಬೇಕೆನ್ನುವ ಆವಾಂತರ ಈಗ ರಜಾ. ಊರಿಗೆ ಹಿಂತಿರುಗಿದರೂ 'ಓದುವ ಕಾಟ ಹಚ್ಚಿಕೋಬೇಕೇ" ಎಂದು ಅನು ಹಾಸಿಗೆಯಿಂದೆದ್ದು ಕುಳಿತು ಮೈಮುರಿದು ಎದ್ದುನಿಂತಳು. ಮುಖ ತೊಳೆದು ಅಡಿಗೆ ಮನೆಯೊಳಕ್ಕೆ ಬಂದು ತಾಯಿಯ ಮುಂದೆ ಕುಳಿತು ಕಾಫಿ ಕುಡಿಯುತ್ತ,

"ಅಮ್ಮ, ಇವತ್ತೇನೇ ಅಡಿಗೆ?" ಎಂದಳು.

"ಒಂದಿಷ್ಟು ಪಡುವಲುಕಾಯಿ ಇದೆ. ಹಾಗೆಯೇ ಅವರೆ ಕಾಳನ್ನು ಹಾಕಿ ಕೂಟು ಮಾಡೋಣಾಂತ"

ಅಷ್ಟರಲ್ಲೇ ಹೊರಗಿನಿಂದ ಅವಳ ತಂದೆ "ಅನೂ" ಎಂದು ಕೂಗಿದರು.

"ಬಂದೇ ಅಣ್ಣಾ" ಎನ್ನುತ್ತ ಅನು ಅಡಿಗೆ ಮನೆಯಿಂದೆದ್ದು ಅಂಗಳಕೆ ಓಡಿದಳು.

"ಏನಣ್ಣಾ?"

ಅನು ಜಡೆಯ ತುದಿಯ ರಂಗಿನ ಟೇಪನ್ನು ಬಿಚ್ಚುತ್ತಾ ತಂದೆಯ ಮುಂದೆ ಬಂದು ನಿಂತಳು.

"ನೋಡಮ್ಮ—ನಿನಗೆ ಯಾವುದೋ ಕಾಗದ ಬಂದಿದೆ."

ಅನುವಿಗೆ ಆಶ್ಚರ್ಯ! ಪತ್ರಗಳು ಎರಡು! ಒಂದು ಕವರು, ಒಂದು ಕಾರ್ಡು. ಕಾರ್ಡನ್ನೇ ಮೊದಲು ತೆಗೆದುಕೊಂಡು ಓದಿದಳು. ಆ ಅಕ್ಷರ ಅವಳ ಗುರುತಿನದು. ಓದುತ್ತ ಓದುತ್ತ ನಾಚಿಕೆ ಸಂತೋಷಗಳಿಂದ ಅವಳ ಮುಖ ಕೆಂಪಾಯಿತು. ತುಟಿಯ ಕದಪಿನ ಮೇಲೊಂದು ನಸುನಗೆ ಸುಳಿಯಿತು. ತಾನು ಕಾಗದವನ್ನೋದಿ ಮುಗುಳ್ನಗೆ ನಕ್ಕುದನ್ನು ತಂದೆಯೆಲ್ಲಾದರೂ ನೋಡಿಬಿಟ್ಟರೋ ಏನೋ ಎಂದು ಸುತ್ತಲೂ ನೋಡಿದಳು. ಆದರೆ ತಂದೆಯಾಗಲೇ ಹೊರಗಡೆ ತರಕಾರಿಯ ತೋಟಕ್ಕೆ ಹೊರಟುಹೋಗಿದ್ದರು. ಅನು ನಾಚಿಕೆಯಿಂದ ಬೇಗಿ ಬಳುಕಿ ತನ್ನ ಕೋಣೆಯೊಳಕ್ಕೋಡಿದಳು.

ಮನಸ್ಸಿನಲ್ಲೇನೋ ತಾಳಹಾಕುತ್ತಾ ಅನು ತನ್ನ ಕೋಣೆಯಿಂದ ಹೊರಗೋಡಿ ಬಂದಳು. ಒಳಕ್ಕೆ ಮತ್ತೆ ಓಡಿಹೋಗಿ ಕನ್ನಡಿಯ ಮುಂದೆ

ಕುಳಿತು ಜಡೆ ಹೆಣೆದುಕೊಂಡು ಕುಂಕುಮದ ಬೊಟ್ಟನ್ನಿಟ್ಟುಕೊಂಡಳು. ಮನಸ್ಸಿನ ಉಲ್ಲಾಸ ಹೇಳತೀರದು ಈ ಉಲ್ಲಾಸದಲ್ಲಿಯೇ ಕಾರ್ಡನ್ನು ಮತ್ತೊಮ್ಮೆ ಓದಿಕೊಂಡಳು.

"ನೀವು ಕೊಟ್ಟ ಕರೆಯನ್ನುಪಯೋಗಿಸಿಕೊಳ್ಳುವ ಸುಯೋಗ ಈಗ ನನಗೆ ದೊರೆತಿದೆ. ಬುಧವಾರದ ದಿನ ನಿಮ್ಮಲ್ಲಿಗೆ ಬರುತ್ತೇನೆ. ನೀವು ದಯೆ ತೋರಿ ರೈಲುನಿಲ್ದಾಣದ ಬಳಿಗೆ ಬಂದರೆ ಒಳ್ಳೆಯದು ನನಗೆ ನಿಮ್ಮ ಮನೆ ತಿಳಿಯದುದರಿಂದ ನಿಮಗೆ ಈ ತೊಂದರೆ ಕೊಡಬೇಕು. ನಾನು ಕೊಡುವ ಉಳಿದ ತೊಂದರೆಗಳೊಂದಿಗೇ ಇದನ್ನೂ ಕ್ಷಮಿಸಬೇಕೆಂದು ಬೇಡುವ,

ನಿಮ್ಮವ

ರಾಜು"

ಅನು ಕಾಗದವನ್ನೋದಿ ಮುಗಿಸಿ ಕನ್ನಡಿ ನೋಡಿಕೊಂಡಳು. ಕನ್ನಡಿಯಲ್ಲಿದ್ದ ತನ್ನ ಪ್ರತಿಬಿಂಬವನ್ನಣಕಿಸಿದಳು. ತನ್ನ ಆಟ ನೋಡಿ ತನಗೇ ನಗು ಬರಲು ನಾಚಿ ನೀರಾಗಿ ಅಡಿಗೆ ಮನೆಗೋಡಿದಳು.

"ಅಮ್ಮ, ಅಮ್ಮ

"ನಾಳೆ ನನ್ನ ಸ್ನೇಹಿತರು ಬರುತ್ತಾರೆ ಕಣೇ—ತರಕಾರಿ ಏನೇನಿದೆಯೇ?" ಎಂದಳು ಅನು.

"ಸ್ನೇಹಿತರು" ಎಂಬ ಮಾತನ್ನು ಕೊಂಚ ಒತ್ತಿ ಹೇಳಿದಂತಿತ್ತು.

"ಈರುಳ್ಳಿ, ಆಲೂಗಡ್ಡೆ ಇದೆ. ಅವರಿಗೆ ಹೇಳಿದರೆ ತೋಟದಿಂದ ಏನಾದರೂ ತರುತ್ತಾರೆ"

"ಸರಿ ಹಾಗಾದರೆ" ಎನ್ನುತ್ತಾ ಅನು ಮತ್ತೆ ತನ್ನ ಕೋಣೆಗೆ ಓಡಿದಳು.

ತಾಯಿ ಒಂದೆರಡು ನಿಮಿಷಗಳ ಅನಂತರ ಮತ್ತೆ ತನ್ನನ್ನು ಕೂಗಿದುದು ಅವಳ ಕಲ್ಪನೆಯ ಆಟಕ್ಕೆ ಭಂಗ ತಂದಿತು.

"ಥೂತ್" ಎಂದುಕೊಳ್ಳುತ್ತಾ ಅಡಿಗೆಮನೆಗೆ ಬಂದಳು.

"ಏನೇ?" ಎಂದಳು ಬೇಸರದ ದನಿಯಲ್ಲಿ!

"ಯಾವ ಸ್ನೇಹಿತರೇ?" ಎಂದರು ಅವಳ ತಾಯಿ.

ಅನು ಬಿಂಕದ ಕೊಂಕಿನ ನಡಿಗೆಯಿಂದ ತಾಯಿಯ ಬಳಿ ಬಂದು ಗುಟ್ಟಾಗಿ ಹೇಳುವಂತೆ ಕಿವಿಯಲ್ಲಿ ಪಿಸುಗುಟ್ಟಿದಳು.—

"ನಮ್ಮ ಕ್ಲಾಸಿನಲ್ಲೇ ಓದುತ್ತಿದ್ದಾರೆ ಕಣೇ ಅವರು. ಅಬ್ಬಾ! ಎಷ್ಟು ಓದಿದಾರೆ ಗೊತ್ತೇ ಅವರು? ನನಗೆ ಗೊತ್ತಿಲ್ಲದುದನ್ನೆಲ್ಲಾ ಓದಿಬಿಟ್ಟಿದಾರೆ ಅವರು. ಅವರ ಹತ್ತಿರ ಸುಮಾರು ಒಂದು ಸಾವಿರ ಪುಸ್ತಕ ಇದೆ ಕಣೆ!—ನನಗೂ ಅವರಿಗೂ ಸ್ನೇಹ. ಅವರ ಹೆಸರು ರಾಜು" ಎನ್ನುತ್ತ ಅನು ತನ್ನ ಕೆನ್ನೆಗೇರಿದ ರಕ್ತಕ್ಕಿಂತಲೂ ವೇಗವಾಗಿ ಹೊರಗೋಡಿಬಿಟ್ಟಳು.

ತಮ್ಮ ಮಗಳೆಂದರೆ ಬುದ್ಧಿಯ ಕಣಿಯೆಂದು ಅಭಿಮಾನವಿಟ್ಟ ಅನುವಿನ ತಾಯಿ, ಅನುವಿಗಿಂತಲೂ ಹೆಚ್ಚು ಓದಿದವರು ಹೇಗಿರಬಹುದೆಂದು ಕಲ್ಪನೆ ಮಾಡಿಕೊಳ್ಳಲು ಯತ್ನಿಸಿ ವಿಫಲರಾಗಿ ಅಡಿಗೆಯಲ್ಲಿ ತೊಡಗಿ ಏನೋ ಗೊಣಗಿಕೊಂಡರು.

ಅನು ಕನ್ನಡಿಯ ಬಳಿಗೆ ಬಂದು ನೋಡಿಕೊಂಡವಳು ಕೂಡಲೇ ಬಚ್ಚಲುಮನೆಗೆ ಹೋಗಿ ಸೋಪುಹಾಕಿ-ಮುಖ ತೊಳೆದುಕೊಂಡು ಬಂದಳು. ಕನ್ನಡಿಯ ಮುಂದೆ ನಿಂತು ಪೌಡರನ್ನು ತೆಳ್ಳಗೆ ಮುಖಕ್ಕೆ ಹಾಕಿಕೊಂಡು ಸಣ್ಣದಾಗಿ ಕಂಡೂಕಾಣದಂತೆ ಕುಂಕುಮದ ಬೊಟ್ಟನ್ನು ತೀಡಿ ತೀಡಿ ಇಟ್ಟು ಕೊಂಡಳು. ಬಾಯಲ್ಲಿ ಚಲನಚಿತ್ರದ ಹಾಡನ್ನು ಗುಂಯ್ಗುಟ್ಟುತ್ತಿದ್ದಳು — "ತುಮನೇ ಮುಝುಕೋ ಪ್ರೇಮ ಸಿಖಾಯಾ -" ಅವಳ ಈ ಉಲ್ಲಾಸ, ಉತ್ಸಾಹದಲ್ಲಿ ಕವರು ಕಣ್ಣಿಗೆ ಕಾಣಿಸಲೇ ಇಲ್ಲ. ಅದು ಮೇಜಿನ ಮೇಲೆ ಹಾಗೆಯೇ ಬಿದ್ದಿತ್ತು. ಅನು ಹಾಡಿಕೊಳ್ಳುತ್ತ ಅದೇ ಗುಂಗಿನಲ್ಲಿಯೇ ಕೋಣೆಯಿಂದ ಹೊರಹೊರಟಳು.

ಮನೆಯಿಂದ ಕೊಂಚ ದೂರದಲ್ಲಿಯೇ ಮುಗಿಲು ಮುಟ್ಟುವಂತಿದ್ದ ಬಿದಿರು ಮೆಳೆ! ಸೂರ್ಯರಶ್ಮಿ ಅವುಗಳ ಮೂಲಕ ಹಾದು ರಸ್ತೆಯ ಮೇಲೆ ರಂಗವಲ್ಲಿಯಿಟ್ಟಿತ್ತು. ಬಿದಿರುಮೆಳೆಗಳು ಒಂದರ ತೋಳತೆಕ್ಕೆಯಲ್ಲೊಂದು ಬಿದ್ದಂತೆ ಇದ್ದುದನ್ನು ನೋಡಿ ಅನುವಿನ ಮನಸ್ಸು ಯಾವುದೋ ಕಲ್ಪನೆಗೆ ಹಾರಿತು. ಮುಖ ಕೆಂಪಾಯಿತು. ಕೈಯಲ್ಲೊಂದು ಬಿದಿರುಕಡ್ಡಿ ಹಿಡಿದು ಈ ಪಕ್ಕಕ್ಕೂ ಆ ಪಕ್ಕಕ್ಕೂ ಬೀಸುತ್ತಾ ಮುನ್ನಡೆದಳು. ಒಂದು ಸಣ್ಣ ಅಳಿಲುಮರಿ ಬೆದರಿದ ಕಣ್ಣುಗಳಿಂದ ಅವಳನ್ನೇ ದಿಟ್ಟಿಸುತ್ತಿತ್ತು. ಅನು ಅದರ ಕಡೆಗೆ ಕಡ್ಡಿಯನ್ನೆಸೆದಳು. ಅಳಿಲು ಅನಿರೀಕ್ಷಿತವಾದ ಈ ಆಘಾತದಿಂದ ತಪ್ಪಿಸಿ

ಕೊಳ್ಳಲು ಚೆಂಗನೆ ಹಾರಿ ಆಯತಪ್ಪಿ ಚರಂಡಿಯೊಳಕ್ಕೆ ಉರುಳಿತು. ಅನು ನಗುನಗುತ್ತಾ ಮುನ್ನಡೆದಳು.

ಇದ್ದಕ್ಕಿದ್ದಂತೆ ಅನುವಿಗೆ ಇನ್ನೊಂದು ಪತ್ರದ ನೆನಪಾಗಿ ಬೇಗಬೇಗನೇ ಮನೆಗೆ ಹಿಂತಿರುಗಿದಳು. ಪತ್ರವನ್ನು ಒಡೆದು ಓದುತ್ತ ಓದುತ್ತ ಮುಖ ಕಪ್ಪಿಟ್ಟಿತು. ಮುಖದಲ್ಲಿ ಮಿಂಚುತ್ತಿದ್ದ ಮುಗುಳುನಗೆ ಮಾಯವಾಗಿ ಮ್ಲಾನತೆ ಮೂಡಿತು. ಉಕ್ಕಿಬಂದ ಕೋಪದಲ್ಲಿ ಬೆಂಕಿಕಡ್ಡಿ ಗೀರಿ ಆ ಪತ್ರವನ್ನು ಸುಟ್ಟುಬಿಟ್ಟಳು!

ಆ ದಿನವೆಲ್ಲಾ ಅನುವಿನ ಮನಸ್ಸಿನ ಮುಂದೆ ಎರಡು ಚಿತ್ರಗಳು— ಒಂದು ಯಾವಾಗಲೂ ನಗುನಗುತ್ತಾ ಹುಡುಗಾಟಿಕೆಯ ಸೊಗಸನ್ನು ಬೀರುತ್ತಿದ್ದ ಮುಖ. ಮತ್ತೊಂದು, ದುಗುಡದಿಂದ ಕಳೆಗುಂದಿದ ಶೀತಲ ಮುಖ ಒಂದು, ಅವಳ ಕಡೆಗೆ ತಿರುಗಿ ತನ್ನ ನಗೆ ಮುಖದಿಂದ ಆಕೆಯನ್ನು, ಆಕೆಯ ರೂಪವನ್ನು, ಗುಣವನ್ನು ಹೊಗಳಿ ಆಕೆಯನ್ನು ಒಲಿಸಿಕೊಂಡಿತು ಮತ್ತೊಂದು, ದೂರದಲ್ಲಿಯೇ ನಿಂತಲ್ಲಿಯೇ ನಿಂತು ತೀಕ್ಷ್ಣ ಶೀತಲತೆಯಿಂದ ಅವಳ ಕಡೆಗೇ ನೆಟ್ಟ ದೃಷ್ಟಿಯಿಂದ ನೋಡುತ್ತಿತ್ತು.

ಮತ್ತೆರಡು ದೃಶ್ಯ— ಸಂತೋಷಕೂಟ ಮುಗಿದ ಕೋಚ ಹೊತ್ತು ರಾಜುವಿನೊಂದಿಗೆ ಹರಟೆ ಹೊಡೆಯುತ್ತಿದ್ದಳು ಅನುವಿನೊಂದಿಗೆ ಮಾತನಾಡುತ್ತಾ ಅವನು ಹೊತ್ತುಗೊತ್ತನ್ನೆಲ್ಲಾ ಮರೆತುಬಿಡುತ್ತಿದ್ದ. ಆಗ ಅವನು ಅವಳನ್ನು ಬಿಟ್ಟು ಹೋಗುವ ಮೊದಲು ಅವಳನ್ನೇ ದಿಟ್ಟಿಸಿ ನೋಡಿ "ಅನು, ನೀನಿಂದು ಬಹಳ ಮೋಹಕಳಾಗಿದ್ದೀ" ಎಂದಿದ್ದ. ಅಂದೇ ಮೊದಲ ಬಾರಿ ಅವನು ತನ್ನನ್ನು ಏಕವಚನದಲ್ಲಿ ಮಾತನಾಡಿಸಿದ್ದುದು. "ಅನು"ವೆಂದು ಕರೆದುದಿಂದು. ಅನುವಿಗೆ ಅವನ ಈ ಹೊಗಳಿಕೆಯಿಂದ ನಿಜವಾಗಿಯೂ ಸಂತೋಷವಾಗಿತ್ತು.

ಎರಡನೆಯ ದೃಶ್ಯ—ಆನಂದನೊಂದಿಗೆ ಮೊದಲ ಪರಿಚಯವಾದಂದಿನದು. ಈ ಎರಡು ದೃಶ್ಯಗಳಲ್ಲಿ ಯಾವುದೊಂದನ್ನೂ ಮರೆಯಲು ಅವಳಿಂದ ಸಾಗದೇ ಹೋಯಿತು. ಆದರೆ ಮರುದಿನ ರಾಜು ಬಂದೊಡನೆಯೇ ಎಲ್ಲ ಬಗೆಯ ಚಿಂತೆಯೂ ಮಾಯವಾಗಿ ಮುಖದಲ್ಲಿ ಮತ್ತೆ ಹೂ ನಗೆ ಅರಳಿತು.

ಆನಂದ ತನ್ನ ಪತ್ರಕ್ಕೆ ಉತ್ತರ ಬರುವುದೆಂದು ಕನಸು ಕಾಣುತ್ತಿದ್ದ. ಅವನ ಹೃದಯ ಆಕಾಶದ ಮೋಡದಂತೆ ತಾರಾಡುತ್ತಿತ್ತು. ತಾನು ಆಕೆಗಾಗಿ ಇಷ್ಟೇಕೆ ಕಾತರಿಸಬೇಕು ? ಅನುವಿನ ವಿಷಯವಾಗಿ ತನಗೆ ಇಷ್ಟೊಂದು ಚಿಂತೆಯಾದರೂ ಏಕೆ ? ಅನುವೆಂದೊಡನೆಯೇ ಹೃದಯ ಯಾತಕ್ಕೆ ಹಿಗ್ಗಬೇಕು ? — ಇವೆಲ್ಲಾ ತೊಡಕಿನ ಸಮಸ್ಯೆಗಳು. ಆನಂದನಿಗೆ ಇವುಗಳಿಗೆ ಯಾವುದಕ್ಕೂ ಉತ್ತರ ಸಿಗಲಿಲ್ಲ ಗಂಡಿನ ಹೃದಯತಂತಿ ಮಿಡಿದು ಹೆಣ್ಣಿನ ಹೃದಯದ ಸಹಾನುಭೂತಿಗಾಗಿ ಕಾದಿರುತ್ತದೆ. ಆ ನಾದಗಳೆರಡರ ಮಧುರ ಮಿಲನದಲ್ಲಿದೆ ಚಿರಂತನ—ಅದನ್ನೇ ತಾನು ಅನುವಿನಿಂದ ಬಯಸುತ್ತಿರುವುದು· ತನಗೆ ಅನುವಿನಲ್ಲಿ ಪ್ರೇಮವಾಗಿದೆಯೆಂದು ಆನಂದನಿಗೆ ಅರಿವಾಗಿರಲಿಲ್ಲ. ಮನಸ್ಸು ಮಾತ್ರ ಒಂದೇ ಬಗೆಯಾಗಿ ಕಾತರಪಡುತ್ತಿತ್ತು.

ಹೆಣ್ಣು ಒಂದು ಸಾರಿ ಒಬ್ಬನ ವಿಚಾರವಾಗಿ ಒಂದು ನಿರ್ಧಾರಕ್ಕೆ ಬಂದರೆ, ಒಂದು ಅಭಿಪ್ರಾಯ ಹೊಂದಿದರೆ ಏನು ಮಾಡಿದರೂ ಅದನ್ನು ಬದಲಾಯಿಸುವುದಿಲ್ಲ. ಆ ವ್ಯಕ್ತಿಯ ನೂರು ತಪ್ಪನ್ನಾಗಲೀ ಕ್ಷಮಿಸಿ ಪ್ರೇಮಿಸುವಳು ಇಲ್ಲದಿದ್ದರೆ ನೂರು ಗುಣಗಳನ್ನೂ ಒತ್ತರಿಸಿ ದ್ವೇಷಿಸುವಳು ಎಂಬುದನ್ನು ತಿಳಿಯದೆ ಆನಂದ ಅನುವಿಗಾಗಿ ಹಾತೊರೆಯುತ್ತಿದ್ದ.

ಲಲಿತಳ ಸಾವಿನಿಂದ ಆನಂದನ ಹೃದಯ ತೆರವಾದಂತಾಗಿತ್ತು. ಇದ್ದ ಒಬ್ಬಳೇ ಅಕ್ಕನನ್ನು ನೀಗಿಕೊಂಡಿದ್ದ. ಪಾರ್ವತಮ್ಮನವರಂತೂ ಮೊದಲೇ ವಯಸ್ಸಾದವರು. ಜತೆಗೆ ಆನಂದ ಜೈಲಿನಲ್ಲಿದ್ದಾಗಲೇ ಕೊರಗಿ ಕೊರಗಿ ಅರ್ಧವಾಗಿ ಹೋಗಿದ್ದರು. ಈಗಂತೂ ಲಲಿತಳ ಸಾವಿನಿಂದ ಎದೆಗೆ ಧಕ್ಕೆಯಾಗಿ ಕಾಯಿಲೆ ಮಲಗಿಬಿಟ್ಟಿದ್ದರು. ಈಗ ಆನಂದನಿಗೆ ಆಸರೆಯಾದರೂ ಯಾರು ? ಹೃದಯದ ಹಿನ್ನೆಲೆಯಲ್ಲಿದ್ದ ಪ್ರೇಮ ಈಗ ತಾನೇ ತಾನಾಯಿತು. ಅವನನ್ನು ಪೂರ್ಣವಾಗಿ ಆವರಿಸಿಕೊಂಡು ಅನುವಿಗೆ ಅವನಿಂದ ಪತ್ರಬರೆಸಿತು. ಅದರ ಫಲವಾಗಿ ಅವನಿಗೆ ದೊರೆತುದು ಬರಿಯ ಚಿಂತೆ ! ಆಕೆ ತನ್ನ ಪತ್ರವನ್ನು ಅಪಾರ್ಥ ಮಾಡಿಕೊಂಡಿರುವಳೆಂಬ ಶಂಕೆ !

ಇನ್ನು ಅವನಿಗೆ ಉಳಿದ ಗೆಳೆಯರೆಂದರೆ ರಾಮು ! ಅದರೆ ರಾಮುವಿಗೂ ಸಂಕಟಗಳಿಗೆ ಕಡಿಮೆಯಿರಲಿಲ್ಲ. ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿರಲಿಲ್ಲ. ಪಾಸಾಗಲಿಲ್ಲ ಜತೆಗೆ ತಮ್ಮ ಕೂಡ ಹೋಗಿಬಿಟ್ಟ. ಮಧ್ಯೆ ಹಲವಾರು

ತೆರಲಿ ತಾಪತ್ರಯಗಳು ಇವೆಲ್ಲಾ ಸೇರಿ ರಾಮುವಿನಿಂದಲೂ ಏನೂ ಸಹಾಯ ವಾಗುವಂತಿರಲಿಲ್ಲ.

ಆನಂದ ಹುಚ್ಚನಂತಾಗಿಬಿಟ್ಟ. ಯಾವಾಗಲೂ ಇಲ್ಲ ಅನುಪಿನ ಚಿಂತೆ, ಇಲ್ಲ ಲಲಿತಳ ಚಿಂತೆ. ದಿನಕ್ಕೆ ಇಪ್ಪತ್ತು ನಾಲ್ಕುಗಂಟೆಯೂ ಕೈಯಲ್ಲಿ ಉಂಗುರ ಹಿಡಿದು ಅದನ್ನೇ ನೋಡುತ್ತಾ ಕುಳಿತಿರುತ್ತಿದ್ದ. ಇಲ್ಲದಿದ್ದರೆ ಬಿಸಿ ಲೆನ್ನದೆ ಮಳೆಯೆನ್ನದೆ ಒಂದೇ ಸಮನಾಗಿ ಅಲೆಯುತ್ತಿದ್ದ. ರಾತ್ರಿಯೆಲ್ಲಾ ನಿದ್ರೆಯನ್ನೇ ಮಾಡುತ್ತಿರಲಿಲ್ಲ. ನಿದ್ರೆ ಬಂದರೆ ತಾನೇ! ಎದೆಯಲ್ಲಿ ನೋವು! ಕಣ್ಣಿನಲ್ಲಿ ನೀರು! ಮನಸ್ಸಿನಲ್ಲಿ ಚಿಂತೆ! ಆನಂದ ದಿನೇದಿನೇ ಸಣ್ಣಗಾಗುತ್ತಾ ಬಂದ.

ಹೃದಯರಹಿತ ಆನಂದನಿಗೆ ರಾಮು ಹೃದಯ ಕೊಟ್ಟಿದ್ದ. ಆದರೆ ಜಗತ್ತಿನ ಕಮ್ಮಾರ ತನ್ನ ಕೈಸುತ್ತಿಗೆಯಿಂದ ಅದನ್ನು ಅಯವರಿಯದೆ ಹೊಡೆ ಯಲಾರಂಭಿಸಿದ್ದ!

ಲಲಿತ ಸತ್ತು ಆಗಲೇ ಎರಡು ತಿಂಗಳಾಗಿತ್ತು. ಆನಂದನಿಗೆ ಏನೇನು ಮಾಡಿದರೂ ಪ್ರೀತಿಯ ಅಕ್ಕನನ್ನು ಮರೆಯುವುದಸಾಧ್ಯವಾಯಿತು. ಕೊರಗು ದಿನೇದಿನೇ ಹೆಚ್ಚಾಗುತ್ತಿತ್ತೇ ಹೊರತು ತಗ್ಗುತ್ತಿರಲಿಲ್ಲ. ರಾಮು ಆನಂದನಿಗೆ ಸಮಾಧಾನದ ಪತ್ರ ಬರೆದ. ಸತ್ತವರಿಗಾಗಿ ಸುಮ್ಮನೆ ಅಳುತ್ತಾ ಕುಳಿತ ರೇನಾದಂತಾಯಿತು. ಒಂದು ಬಾರಿ ಬಾಡಿದ ಹೂವು ಮತ್ತೆ ಅರಳುವುದೇ?– "ನಿನ್ನ ಜೀವನವನ್ನು ಸರಿಮಾಡಿಕೊ–ಇನ್ನೇನು ಕಾಲೇಜು ಪ್ರಾರಂಭ ವಾಗುತ್ತದೆ. ನೀನೂ ಮತ್ತೆ ಕಾಲೇಜಿಗೆ ಸೇರಿಕೊ" ಎಂದು ರಾಮು ಬರೆದಿದ್ದ. ಆದರೆ ಆನಂದನಿಗೆ ಅದರಿಂದೆಲ್ಲಾ ಸಮಾಧಾನವಾಗುವುದೇ? ತನ್ನ ಹೃದ ಯದ ನೋವನ್ನೆಲ್ಲಾ ಕಾರಿ ಕಾಗದ ಬರೆದ.

"ಪ್ರಿಯ ರಾಮು,

ನಿನ್ನ ಕಾಗದ ತಲುಪಿತು. ನಿನ್ನ ತಮ್ಮನ ಮರಣದ ಸುದ್ದಿ ನನಗೆ ಸಿಡಿಲೆರಗಿದಂತೆ! ನಾವಿಬ್ಬರೂ ಒಂದೇ ಮುರುಕು ದೋಣಿಯಲ್ಲಿ ಕಣ್ಣೀರಿನ ಕಡಲಿನ ಮೇಲೆ ಸಾಗಬೇಕಾಗಿದೆ; ನಿನಗೆ ತಮ್ಮನ ಸಾವು—ನನಗೆ ಅಕ್ಕನ ಸಾವು!

ರಾಮು, ನೀನೇನೋ ನನಗೆ ಸಮಾಧಾನ ನೀಡಲು ಪ್ರಯತ್ನಿಸಿದ್ದೀಯೆ. ಜೀವನದ ಕೊನೆ ಸಾವು. ಸಾವಿಲ್ಲದೇ ಉಳಿಗಾಲವೇ ಇಲ್ಲ ಜೀವಕ್ಕೂ ಸಾವಿಗೂ ನಂಟು. ಬಾಳೆಲ್ಲಾ ಸುಳ್ಳುನಾಟ; ನಿಜ. ಈ ತತ್ತ್ವವನ್ನೆಲ್ಲಾ ಬಹಳ ಸುಲಭವಾಗಿ ಹೇಳಬಹುದು. ಕೇಳುತ್ತಿರುವಾಗ ಮರುಮಾತಿಲ್ಲದೆ ಒಪ್ಪಲೂಬಹುದು. ಆದರೆ ಇದೆಲ್ಲಾ ಲಲಿತಳನ್ನು ಜ್ಞಾಪಿಸಿಕೊಂಡ ಕೂಡಲೇ ಈ ತತ್ತ್ವವೆಲ್ಲಾ ಕರಗಿ ನೀರಾಗುತ್ತದೆ ಮೃದುತೆ, ಶಾಂತಿ, ಸಹನೆ, ಪ್ರೇಮಗಳ ಮೂರ್ತಿ ಲಲಿತ. ನನಗಾಗಿ ಎಷ್ಟೊಂದು ಕಷ್ಟ ಸಹಿಸಿದಳು. ನನ್ನ ಮಾನವತಿ ನನಗೆ ಬಂದು, ಅವಳನ್ನು ಸರಿಯಾಗಿ ಅರ್ಥ ಮಾಡಿಕೊಂಡು ಅವಳಲ್ಲಿ ವಿಶ್ವಾಸ ತೋರುವಷ್ಟರಲ್ಲೇ ಹೋಗಿಬಿಟ್ಟಳು. ನನಗೆ ನೀವೆಲ್ಲಾ ಸೇರಿ ಹೃದಯ ಕೊಟ್ಟುದು ಗಾಯವಾಗಿ ರಕ್ತ ಸೋರಲೆಂದೇ ಇರಬೇಕು ಎನಿಸುತ್ತೆ! ನೀನೇ ಯೋಚಿಸು ರಾಮು. ನಾನೇ ನನ್ನ ಹುಟ್ಟಿದಹಬ್ಬದ ದಿನ ಸ್ಮಶಾನದಲ್ಲಿ ಅವಳನ್ನು ಸುಟ್ಟುಬಂದೆ. ನನ್ನ ಹುಟ್ಟಿದ ಹಬ್ಬಕ್ಕಾಗಿ ಅವಳಿಗೆ ಎಷ್ಟು ಸಡಗರ! ಆದರೆ ನನ್ನ ಹುಟ್ಟಿದ ಹಬ್ಬದ ದಿನವೇ ತಾನು ಮಸಣದಲ್ಲಿ ಮಣ್ಣಾಗುವುದು ತಿಳಿದಿದ್ದರೆ!— ಅವಳ ಕೊನೆಯ ಮಾತುಗಳು— "ಆನಂದ—ಉಂಗುರ—ಆನಂದ" ಅವುಗಳನ್ನು ನೆನೆದುಕೊಂಡರೆ, ಕರುಳನ್ನು ಕಿತ್ತು ಕೈಗೆ ಕೊಟ್ಟಂತಾಗುತ್ತದೆ! ನನಗಾಗಿ ಎಷ್ಟು ಕಷ್ಟಪಟ್ಟಳು—ಕೊನೆಗೂ ಸಾಯುವ ಮೊದಲಿನ ಕೊನೆಯ ಮಾತು ಕೂಡ ನನ್ನ ವಿಚಾರವೇ! ಅಂತಹ ಲಲಿತಾ ಇಂದಿಲ್ಲ!

ರಾಮು, ನೀನೇನೋ ಸಮಾಧಾನಕ್ಕಾಗಿ ತತ್ತ್ವ ಉಪದೇಶಿಸಬಹುದು. "ಎಲ್ಲರೂ ಸಾಯಲೇಬೇಕು; ಅದು ಜಗತ್ತಿನ ನಿಯಮ"—ನಿಜ! ಆದರೆ ಹೀಗೆ ಎಳೆತನದಲ್ಲಿಯೇ ಸಾಯಬೇಕೆನ್ನುವುದು ಜಗತ್ತಿನ ನಿಯಮವೇ? ಹೂವು ಅರಳಿದ ಮೇಲೆ ಕೆಲಕಾಲ ಕುಣಿದು ಅನಂತರ ಬಾಡುವುದು ಸಹಜ ಆದರೆ ಮೊಗ್ಗಿನಲ್ಲಿಯೇ ಬಾಡಬೇಕೇ? ಲಲಿತಳಿಗೆ ಮೊನ್ನೆಗೆ ೨೬ ವರ್ಷ. ೨೬ ವರ್ಷದಲ್ಲಿ ಏನು ಬದುಕಿ—ಬಾಳಿರಬಹುದೆಂಬುದನ್ನು ನೀನೇ ಯೋಚಿಸಿಕೋ. ಸಂಪೂರ್ಣವಾಗಿ ಬದುಕಿ—ಬಾಳಿ ಸಂತೋಷವಾಗಿದ್ದು ಮುಪ್ಪಿನಲ್ಲಿ ಸತ್ತರೆ ನನಗೂ ದುಃಖವಾಗುತ್ತಿರಲಿಲ್ಲ. ಆದರೆ ಇನ್ನೂ ಚಿಕ್ಕತನದಲ್ಲೇ! ಲಲಿತಳಿಗೆ ಆಸೆಯಿರಲಿಲ್ಲವೇ? ಜೀವನದ ಮೇಲೆ ಪ್ರೀತಿಯಿರಲಿಲ್ಲವೇ?

ಉಳಿದವರಂತೆಯೇ ತಾನೂ ಮುಚ್ಚಟೆಯಾಗಿ ಬದುಕಿ ಬಾಳುವ ಆಕಾಂಕ್ಷೆಯಿರಲಿಲ್ಲವೇ ? ಅಂತಹವರನ್ನು ಕೊಲ್ಲಲು ದೇವರಿಗಾದರೂ ಮನಸ್ಸು ಹೇಗಾದೀತೋ?–ಲಲಿತಳ ಆಶೆ ಆಕಾಂಕ್ಷೆಗಳೆಲ್ಲಾ ಅವಳೊಂದಿಗೇ ಬೂದಿಯಾದುವು. ನನಗಾಗಿ ಕೊರಗಿದ ಒಂದು ಜೀವವೂ ಇಲ್ಲದಂತಾಯಿತು! ಜಗತ್ತು ನನ್ನ ಪಾಲಿಗೆ ತೆರವಾದಂತೆ. ಹೊಗೆ ಬೆಂಕಿಗೆ ಹಿಂತಿರುಗದಂತೆಯೇ ಅವಳೂ ನಮ್ಮ ಜತೆಗೆ ಮತ್ತೆ ಹಿಂತಿರುಗಲಾರಳು. ಅವಳ ನೊಂದ ಬಾಳಿಗಾಗಿ, ಅವಳು ನನಗೆ ತೋರಿಕೊಟ್ಟ ವಿಶ್ವಾಸದ ಪ್ರೀತಿಯ ಹಾದಿಗಾಗಿ ತಬ್ಬಲಿಯಾದ ಅವಳ ಮಕ್ಕಳಿಗಾಗಿ ನನ್ನೆದೆ ಮಿಡುಕುತ್ತಿದೆ ರಾಮು ಅವಳು ನನ್ನ ಹುಟ್ಟಿದ ಹಬ್ಬಕ್ಕಾಗಿ ತಂದುಕೊಟ್ಟ ಉಂಗುರವಿನ್ನೂ ನನ್ನ ಮುಂದೆಯೇ ಇದೆ!

ಇಷ್ಟೇ ಅಲ್ಲ ರಾಮು, ಮೊನ್ನೆಯ ದಿನ ನನ್ನ ಭಾವ ನರಸಿಂಹಯ್ಯನವರಿಗೆ ಎರಡನೆಯ ಲಗ್ನ. ನನಗೂ ಲಗ್ನಪತ್ರಿಕೆ ಬಂದಿತು. "ನನ್ನ ಪ್ರೀತಿಯ ಮೈದುನನಿಗೆ" ಎಂದು ಬೇರೆ ಬರೆದಿತ್ತು ಅದರಲ್ಲಿ. ಇನ್ನು ಲಲಿತಳ ಮಕ್ಕಳು ಮಲತಾಯಿಯ ಕೈಯಲ್ಲಿ ಎಷ್ಟು ಬೇಯಬೇಕೋ! ನಾಗವಲ್ಲಿಯನ್ನು, ವಿಮಲಳನ್ನು ನಮ್ಮ ಮನೆಗೇ ಕರೆದುತಂದು ಇಟ್ಟುಕೊಂಡು, ಸಾಕಬೇಕೆಂದು ನನ್ನ ಆಸೆ. ಆದರೆ ಭಾವ ಒಪ್ಪಬೇಕಲ್ಲ!

ಪ್ರೇಮದ ಕೊಲೆ ಕಂಡು ಮನಸ್ಸು ಬಹಳ ರೋಸಿದೆ ರಾಮು. ಹದಿಮೂರು ವರ್ಷಗಳ ಕಾಲ ಸಂಸಾರ ಮಾಡಿದುದು, ಅವರನ್ನೇ ಅನುಸರಿಸಿ ಅವರ ನೆರಳಿನಂತಿದ್ದು ಅವರ ಮನೆ ಬೆಳಗಿಸಿದ ಲಲಿತ ಸತ್ತಿನ್ನೂ ಎರಡು ತಿಂಗಳಾಗಿಲ್ಲ. ಆಗಲೇ ಮತ್ತೊಂದು ಮದುವೆ! ಅಗ್ನಿಸಾಕ್ಷಿಯಾಗಿ ಮಾಡಿದ ವಚನ ಅಂದಿನ ಅಗ್ನಿಗೇ ಆಹುತಿಯಾಯಿತೇನೋ—ಮದುವೆಯ ಬೆಂಕಿಯ ಸಾಕ್ಷಿ ಮಸಣದ ಬೆಂಕಿಯಲ್ಲೇ ಬೂದಿಯಾಯಿತೇನೋ ?—ಅಂತೂ ಭಾವನಿಗೆ ಮತ್ತೊಂದು ಮದುವೆಯಾಯಿತು. ಅದೂ ಲಲಿತಳ ಹುಟ್ಟಿದ ದಿನ!

ಅಮ್ಮನ ವಿಚಾರ ಏನು ಹೇಳಲೂ ತೋಚದು ಒಂದೊಂದು ಸಾರಿ ಒಂದೊಂದು ತರಹವಾಗಿರುತ್ತಾಳೆ. ಒಳಗೊಳಗೇ ಕೊರಗುತ್ತಾಳೆ ಹುಚ್ಚಿಯ ಹಾಗಾಗುತ್ತಾಳೆ. ಈಗಂತೂ ಕಾಯಿಲೆ—ಹಾಸಿಗೆ ಹಿಡಿದಿದ್ದಾಳೆ. ಏಳಲು ತ್ರಾಣವಿಲ್ಲ. ಕೂಲು ತ್ರಾಣವಿಲ್ಲ. ಸುಮ್ಮನೆ ಗಂಟೆಗಂಟೆಗಳ ಕಾಲ ಮಾತೇ ಆಡದೆ ಬಿದ್ದುಕೊಂಡಿರುತ್ತಾಳೆ. ಗಂಜಿಯನ್ನು ಕೂಡ ಕುಡಿಯುವುದಿಲ್ಲ

ಮಾತನಾಡಲು ಆರಂಭಿಸಿದರಂತೂ ನಿಲ್ಲಿಸುವುದೇ ಕಷ್ಟ ! ಸುಮ್ಮನೇ ಹುಚ್ಚು ಹುಚ್ಚಾಗಿ ಮಾತನಾಡುತ್ತಿರುತ್ತಾಳೆ. ಯಾವಾಗಲೂ ಲಲಿತಳ ಯೋಚನೆಯೇ—ಲಲಿತಳ ಮಾತೇ! "ಲಲಿತಾ ಹೀಗಿದ್ದಳು; ಲಲಿತಾ ಹಾಗಿದ್ದಳು. ಲಲಿತಾ ಹೀಗೆ ಮಾಡುತ್ತಿದ್ದಳು; ಹಾಗೆ ಮಾಡುತ್ತಿದ್ದಳು." ಇದೇ ಗೀಳಾಗಿದೆ. ಈ ಮಧ್ಯೆ ನನ್ನದು ಬೇರೆ ಅವಳಿಗೆ ಯೋಚನೆ. ಒಂದೇ ಸಮನಾಗಿ ಹಟ ಹಿಡಿದಿದಾಳೆ— ಕಾಲೇಜು ಸೇರು, ಕಾಲೇಜು ಸೇರು ಎಂದು. ಇನ್ನು ಕಾಯಿಲೆಯೆಲ್ಲಿ ಜೋರಾಗುವುದೋ ಎಂದು ಹೆದರಿ ನಾನೂ ಅವಳ ಸಮಾಧಾನಕ್ಕಾಗಿ ಕಾಲೇಜಿಗೆ ಸೇರುತ್ತೇನೆಂದು ಹೇಳುತ್ತಿದೇನೆ. ನೀನೂ ಅದೇ ಬರೆದಿದ್ದೀಯೆ. ನೋಡಬೇಕು.

ಕೊನೆಯದಾಗಿ ನನ್ನ ವಿಚಾರ ಕೊಂಚ, ನಿಜ. ನೀನು ಬರೆದಿರುವುದು ನನಗೆ ಈಗ ಸತ್ಯವಾಗಿ ತೋರುತ್ತಿದೆ. ಅನುವಿನಲ್ಲಿ ನನಗೆ ಪ್ರೇಮವೆಂಬುದನ್ನು ನಾನೂ ಈಗ ತಿಳಿದುಕೊಂಡಿದ್ದೇನೆ. ಮೊದಲ ಪರಿಚಯದ ದಿನದಿಂದಲೂ ಅವಳಿಗಾಗಿ ನಾನು ಕಾತರಿಸಿದುದು ಇದಕ್ಕೇ ಇರಬೇಕು. ಆದರೆ ಇದು ಹೀಗಾದೀತೆಂದು ನಾನು ಆಗ ಯೋಚಿಸಿರಲಿಲ್ಲ. ಅದು ಪ್ರೇಮವೆಂಬುದೂ ನನಗೆ ಗೊತ್ತಿರಲಿಲ್ಲ. ಈಗಂತೂ ಎಲ್ಲ ಬೆಳಕಾಗುತ್ತಿದೆ. ಅಕ್ಕ ಹೋದಳು. ಅವಳ ವಿಶ್ವಾಸವೂ ನನಗೆ ಈಗಿಲ್ಲ. ದೊಡ್ಡ ತೆರವು. ನನ್ನ ಹೃದಯದಲ್ಲಿ ಒಂದು ಆಸರೆ ಬೇಕಾಗಿತ್ತು; ಆಪ್ತತೆ ಬೇಕಾಗಿತ್ತು. ಎಲ್ಲಿಂದಲಾದರೂ ಒಂದೇ ಒಂದು ವಿಶ್ವಾಸದ ಮಾತು, ಸಮಾಧಾನದ ದನಿ ಕೇಳಿದರೆ ಸಾಕೆಂದು ಹೃದಯ ಒದ್ದಾಡುತ್ತಿತ್ತು. ಆಗ ನಾನೊಂದು ತಪ್ಪು ಕೆಲಸ ಮಾಡಿದೆ ನನ್ನ ಯೋಚನೆ ಅಷ್ಟು ತಿಳಿಯಾಗಿರಲಿಲ್ಲ. ಅನುವಿನಿಂದ ನಾನು ವಿಶ್ವಾಸ ಬಯಸಿದೆ ಉಗಾದಿಯ ದಿನ ಆಕೆಗೊಂದು ಪತ್ರ ಕೂಡ ಬರೆದೆ. ಆದರೆ ಅದರ ಪರಿಣಾಮವೇನು ಗೊತ್ತೇ? ಅನು ಆ ಕಾಗದವನ್ನು ವಿಪರೀತವಾಗಿ ತೆಗೆದುಕೊಂಡಿರುವಳಂತೆ. ನನ್ನ ಮೇಲೆ ಅವಳಿಗೆ ಬಹಳ ಕೋಪ ಬಂದಿದೆಯಂತೆ. ಅದೂ ಸರಿ, ರಾಮು· ನಾನು ಅನುವಿಗೆ ಕಾಗದ ಬರೆದುದೂ ತಪ್ಪು. ಇಷ್ಟಾಗಿ ನಾನು ಆಕೆಯಿಂದ ವಿಶ್ವಾಸ ಬಯಸಲು ನನಗೆ ಯಾವ ಹಕ್ಕು ?— ಈ ಪ್ರಪಂಚದಲ್ಲಿ ಯಾರಿಗೂ ಯಾರಿಂದಲೂ ಪ್ರೇಮ-ವಿಶ್ವಾಸ ಬಯಸುವ ಹಕ್ಕು ಇಲ್ಲವೆಂದು ತೋರುತ್ತದೆ.

ಅಂತೂ ನನ್ನ ಹೃದಯವನ್ನು ಕಲ್ಲಾಗಿಸಿಕೊಳ್ಳಬೇಕಾಗಿದೆ. ಹೃದಯವಿಲ್ಲದವನಿಗೆ ಹೃದಯ ಕೊಟ್ಟು ಈಗ ಅದನ್ನು ಕಲ್ಲಾಗಿಸಿಕೋ ಎನ್ನುತ್ತಿದೆ ವಿಧಿ! ಬಾಳಿನ ಬಿರುಗಾಳಿಯಲ್ಲಿ ಅಲ್ಲಾಡದೆ ನಿಲ್ಲುವ ಕಲ್ಲಾಗಬೇಕು! ನೋಡೋಣ, ಕಾಲದ ಅನಂತ ಪ್ರವಾಹದಲ್ಲಿ ಅದು ಉಳಿಯುವುದೋ ಇಲ್ಲ ಕೊಚ್ಚಿಕೊಂಡು ಹೋಗುವುದೋ!

ನಿನ್ನ ನೊಂದ ಗೆಳೆಯ,
**ಆನಂದ"**

## ೧೬

ಕೊನೆಗೂ ಆನಂದ ತನ್ನ ಇಷ್ಟದ ವಿರುದ್ಧ ಕಾಲೇಜು ಸೇರಿದ. ಪಾರ್ವತಮ್ಮನವರ ಮನಸ್ಸಿಗೆ ಸಮಾಧಾನ ನೀಡುವುದಕ್ಕಾಗಿ ಮಾಡಿದುದು ಅದು. ಪಾರ್ವತಮ್ಮನವರ ಕಾಯಿಲೆ ದಿನ ಕಳೆದಂತೆ ಹೆಚ್ಚಾಗಿತ್ತು. ಹಾಸಿಗೆಯಿಂದ ಏಳಲು ಕೂಡ ಅವರಿಂದಾಗುತ್ತಿರಲಿಲ್ಲ. ಇಷ್ಟಾದರೂ ಆನಂದ ಹಳ್ಳಿಯಲ್ಲಿಯೇ ಉಳಿದುಕೊಳ್ಳಬೇಕೆಂದರೆ ಅವರು ಒಪ್ಪುತ್ತಿರಲಿಲ್ಲ. ಇದರಿಂದ ಆನಂದ ಕಳವಳದ ಹೃದಯ ಹೊತ್ತು ಪ್ರತಿದಿನವೂ ಬೆಳಗ್ಗೆ ರೈಲಿನಲ್ಲಿ ಮೈಸೂರಿಗೆ ಹೋಗಿ ಕಾಲೇಜು ಮುಗಿಸಿಕೊಂಡು ಸಂಜೆಯ ರೈಲಿನಲ್ಲಿ ವಿತ್ತಿ ಹಿಂತಿರುಗುತ್ತಿದ್ದ. ಬರುವ ವೇಳೆಗೆ ತಾಯಿಗೆ ಹೇಗೋ ಏನೋ ಎಂದೇ ಅವನ ಚಿಂತೆ! ಹೀಗೆಯೇ ಒಂದೆರಡು ವಾರ ಕಳೆಯಿತು.

ಈ ವಾರ ಪಾರ್ವತಮ್ಮನವರಿಗೆ ಕಾಯಿಲೆ ವಿಷಮಿಸಿತ್ತು. ಅವರ ಸ್ಥಿತಿ ಸಂಶಯಾಸ್ಪದವಾಗಿತ್ತು. ಆನಂದ ಕಾಲೇಜಿಗೆ ಹೋಗದೆ ಹಳ್ಳಿಯಲ್ಲಿಯೇ ಉಳಿದುಕೊಂಡು ತಾಯಿಯ ಸೇವೆ ಶುಶ್ರೂಷೆ ಮಾಡುತ್ತಿದ್ದ. ಪಾರ್ವತಮ್ಮನವರು ಹಾಸಿಗೆಯ ಮೇಲೆ ತರಗೆಲೆ ಮಣ್ಣುನೆಲದ ಮೇಲೆ ಬಿದ್ದಂತೆ ಬಿದ್ದುಕೊಂಡಿದ್ದರು. ಮೌನವಾಗಿಯೇ ನರಳುತ್ತಿದ್ದರು. ಇದ್ದಕ್ಕಿದ್ದಂತೆ ಏನೋ ಜ್ಞಾಪಿಸಿಕೊಂಡವರಂತೆ ತುಟಿಯಲುಗಿಸುತ್ತಿದ್ದರು. ಕಣ್ಣನ್ನು ದೊಡ್ಡದಾಗಿ ತೆರೆದು ಭೀತಿಯಿಂದ ಸೂರಿನ ಕಡೆಗೇ ದಿಟ್ಟಿಸುತ್ತಿದ್ದರು. ಒಂದೊಂದು ಸಾರಿ ತ್ರಾಣ ಬಂದು ಆನಂದನ ಕಡೆಗೆ ತಿರುಗಿ ಮಾತನಾಡಲು ಯತ್ನಿಸುತ್ತಿದ್ದರು. ಒಮ್ಮೊಮ್ಮೆ ಅರ್ಧಜ್ಞಾನದಲ್ಲಿ "ಲಲಿತಾ-ಲಲಿತಾ" ಎಂದು ಕೂಗಿಕೊಂಡು

ಏಳಲು ಯತ್ನಿಸುತ್ತಿದ್ದರು. ಆಗ ಪಕ್ಕದಲ್ಲಿದ್ದ ಆನಂದ "ಅಮ್ಮ, ಅಮ್ಮ" ಎಂದರೆ ತಬ್ಬಿಬ್ಬಾಗುತ್ತಿದ್ದರು. ಈ ವಾರವೆಲ್ಲಾ ಹಾಗೆಯೇ ಕಳೆಯಿತು. ಹಗಲೆನ್ನದೆ ರಾತ್ರಿಯೆನ್ನದೆ ಆನಂದ ತಾಯಿಯ ಹಾಸಿಗೆಯ ಪಕ್ಕದಲ್ಲಿಯೇ ಕುಳಿತಿದ್ದ. ನಿದ್ರೆಯ ನೆರಳು ಕೂಡ ಅವನನ್ನು ಸೋಕಿರಲಿಲ್ಲ. ಶನಿವಾರದ ರಾತ್ರಿಯಂತೂ ಪಾರ್ವತಮ್ಮನವರು ಈಗಲೋ ಆಗಲೋ ಎನಿಸಿಬಿಟ್ಟಿತ್ತು. ಕಣ್ಣಿನಲ್ಲಿ ಕಣ್ಣಿಟ್ಟು ಅವರನ್ನು ನೋಡಿಕೊಂಡ ಆನಂದ. ಭಾನುವಾರ ಬೆಳಿಗ್ಗೆಯಾದರೂ ಪಾರ್ವತಮ್ಮನವರಿಗೆ ಮಬ್ಬು ತಿಳಿಯಲಿಲ್ಲ. ಇವರ ಆಸೆ ಇನ್ನಿಲ್ಲವೆಂದು ವೈದ್ಯರೂ ಹೇಳಿ ಎದ್ದರು. ಆನಂದ ಮೌನವಾಗಿ ತಲೆತಗ್ಗಿಸಿ ಪಕ್ಕದಲ್ಲಿಯೇ ಕುಳಿತಿದ್ದ. ಒಂದೆರಡು ನಿಮಿಷದಲ್ಲೇ ಪಾರ್ವತಮ್ಮನ ವರ್ಗೆ ಜೀವರಲಾರಂಭಿಸಿತು. ಜ್ವರ ಇದ್ದಕ್ಕಿದ್ದಂತೆ ತಗ್ಗಿತು. ಮಬ್ಬು ತಿಳಿದಿತು. ವಿಪರೀತ ಆಯಾಸವಾಗಿದ್ದರೂ ಮುಖದಲ್ಲೇನೋ ಗೆಲುವು ತೋರಿತು. ಮಧ್ಯಾಹ್ನ ಕೊಂಚ ಹಾಲು, ಗಂಜಿ ಕೂಡ ಸೇರಿತು.

"ಸದ್ಯ ಪರವಾಗಿಲ್ಲ" ಎಂದು ಆನಂದ ನಿಟ್ಟುಸಿರಿಟ್ಟ.

ಅಂದು ರಾತ್ರಿ ಆನಂದ ಬಹಳ ಯೋಚನೆ ಮಾಡಿದ. ಮಾರನೆದಿನ ಮೈಸೂರಿಗೆ ಹೋಗುವುದೇ ಬೇಡವೇ ಎಂಬುದೊಂದು ದೊಡ್ಡ ಸಮಸ್ಯೆ. ಅವರ ಅಚ್ಚುಮೆಚ್ಚಿನ ಅಧ್ಯಾಪಕರೊಬ್ಬರಿಗೆ ಅಲ್ಲಿಂದ ವರ್ಗವಾಗಿತ್ತು. ಅದಕ್ಕಾಗಿ ಅವನ ತರಗತಿಯವರೆಲ್ಲಾ ಸೇರಿ ಆ ಅಧ್ಯಾಪಕರೊಂದಿಗೆ ಸೋಮವಾರ ಸಂಜೆ ವಿಹಾರಕೂಟವನ್ನೇರ್ಪಡಿಸಿದ್ದರು. ಆನಂದನಿಗೆ ಆ ಅಧ್ಯಾಪಕರನ್ನು ಕಂಡರೆ ಬಹಳ ಗೌರವ, ವಿಶ್ವಾಸ. ಆದುದರಿಂದ ಅಲ್ಲಿಗೆ ಅವನು ಹೋಗಲೇ ಬೇಕಾಗಿತ್ತು. ಆದರೆ ತಾಯಿಯನ್ನು ಈ ಸ್ಥಿತಿಯಲ್ಲಿ ಬಿಟ್ಟು ಹೋಗುವುದಾದರೂ ಹೇಗೆ!

"ಅಮ್ಮಾ!"

ಪಾರ್ವತಮ್ಮನವರು ಮೆಲ್ಲಗೆ ಕಣ್ಣನ್ನು ಅವನ ಕಡೆಗೆ ಹೊರಳಿಸಿದರು.

"ಈಗ ಹೇಗಿದೆಯಮ್ಮ?"

ಪಾರ್ವತಮ್ಮನವರು ತುಟಿಯಲುಗಿಸಿದರು. ಮಾತು ಕೇಳಲಿಲ್ಲ. ಆನಂದ ಪಕ್ಕದಲ್ಲಿದ್ದ ಹಾಲಿನ ಬಟ್ಟಲಿನಿಂದ ಒಂದು ತೊಟ್ಟು ಹಾಲು ಕುಡಿಸಿದ. ಪಾರ್ವತಮ್ಮನವರ ಮುಖ ಕೊಂಚ ಗೆಲುವಾಯಿತು.

" ಕೊಂಚ ವಾಸಿ. "

" ಈಗ ನೋವು ಇಲ್ಲ ತಾನೇ ? ತಲೆನೋವು ಹೇಗಿದೆಯಮ್ಮ ? "

" ಇಲ್ಲ "

ಆನಂದ ಹಾಗೆಯೇ ಅವರ ಪಕ್ಕದಲ್ಲಿಯೇ ಕುಳಿತಿದ್ದ. ದೀಪ ಮಿಣುಕು ತ್ತಿತ್ತು. ಆನಂದನ ಹೃದಯ ತುಂಬಿತ್ತು. ಕಣ್ಣಿನಲ್ಲಿ ನೀರಾಡಿತು.

" ನಾಳೆ ನಾನು ಮೈಸೂರಿಗೆ ಹೋಗಿಬರಲೇನಮ್ಮ ? "

ಪಾರ್ವತಮ್ಮನವರಿಗೆ ಆ ಪ್ರಶ್ನೆ ಕೇಳಿತೋ ಇಲ್ಲವೋ ಸುಮ್ಮನೇ ಅವನ ಕಡೆಗೇ ನೋಡುತ್ತಿದ್ದರು.

" ಅಮ್ಮ, ನಾಳೆ ಮೈಸೂರಿಗೆ ಹೋಗಿ ಬರಲೇನಮ್ಮ—ಕೊಂಚ ಕೆಲಸ ವಿತ್ತು. ರಾತ್ರಿಗೇ ಹಿಂದಿರುಗಿ ಬಂದುಬಿಡುತ್ತೇನೆ. ನೀನು ಪರವಾಗಿಲ್ಲ ಅಂದರೆ ಹೋಗುತ್ತೇನಮ " ಎಂದ ಆನಂದ.

" ಹೋಗಿ ಬಾ ! "

ಆನಂದ ಮನಸ್ಸಿನಲ್ಲೇ ಕಳವಳಪಡುತ್ತಾ ಅಲ್ಲಿಯೇ ಕುಳಿತಿದ್ದ. ದೀಪ ಮೊದಲಿನಂತೆಯೇ ಮಿಣುಕುತ್ತಿತ್ತು. ಪಾರ್ವತಮ್ಮನವರು ಹಾಸಿಗೆಯಲ್ಲಿ ಮೌನವಾಗಿ ಮಲಗಿದ್ದರು.

ಆನಂದ—ಅನಸೂಯಾ ಈಗ ಸಹಪಾಠಿಗಳು. ಒಂದೇ ತರಗತಿಯಲ್ಲಿ ಓದುವವರು. ಆನಂದನಿಗೆ ಮೊದಲದಿನವೇ ಅನುವಿನ ಜತೆಗೆ ಪಾಠ ಕೇಳಲು ಒಂದೇ ಕೋಣೆಯಲ್ಲಿ ಕುಳಿತಾಗ ಮನಸ್ಸಿಗೆ ಹೇಗೆ ಹೇಗೋ ಆಗಿತ್ತು. ಹೃದಯದಲ್ಲಿ ಒಂದು ಬಗೆಯ ಕಹಿ, ಕಳವಳ, ಕಾತರ. ತಾನು ಅನುವಿಗೆ ಬರೆದ ಪತ್ರದ ನೆನಪಾಗಿತ್ತು. ಅವಳು ಅದಕ್ಕೆ ಏನೆಂದುಕೊಂಡಿರುವಳೋ ಏನೋ ! ರಾಜುವಂತೂ ಮೊದಲಿನ ವಿಶ್ವಾಸದ ತೋರಿಕೆಯೂ ಇಲ್ಲದೆ ವಿಷನೋಟದಿಂದ ದಿಟ್ಟಿಸುತ್ತಿದ್ದ. ಆನಂದನಿಗೆ ಅನುವಿನ ಕಡೆಗೆ ನೋಡಬೇಕೆಂದು ಅರ್ಧ ಮನಸ್ಸು. ಆದರೆ ನೋಡಲೇನೋ ಒಂದು ಬಗೆಯ ಹಿಂದೇಟು. ಇಷ್ಟಾದರೂ ಅನು ತನ್ನ ಕಡೆಯೇ ನೋಡುತ್ತಿರುವಳು, ಅದೂ ವಿಚಿತ್ರವಾಗಿ—ಎಂದು ಅವನಿಗೆ ಹೇಗೋ ಗೊತ್ತಾಗಿತ್ತು. ಆಗ ಒಂದು ಬಗೆಯ ಹೇಳಲಾರದ ಹಿಗ್ಗು. ಅವಳನ್ನು ತಾನೇ ಮಾತನಾಡಿಸಬೇಕೆನ್ನುವ ಆಸೆ. ಆದರೆ ಮನಸ್ಸಿನಲ್ಲಿ ಚಿತ್ರಿಸಿಕೊಂಡ ಪದಗಳೆಲ್ಲಾ ಎದೆಯನ್ನು ಚುಚ್ಚುತ್ತಿದ್ದವೇ ಹೊರತು

ಬಾಯಿಂದ ಹೊರಬೀಳುತ್ತಿರಲಿಲ್ಲ. ಅನು ತರಗತಿ ಬಿಟ್ಟು ಅಷ್ಟು ದೂರ ಹೋದರೆ ಕಣ್ಣು ಅವಳನ್ನೇ ಅನುಸರಿಸಿಕೊಂಡು ಹೋಗುತ್ತಿತ್ತು. ಅವಳೊಂದಿಗೆ ಯಾರಾದರೂ ಮಾತನಾಡಿದರೆ, ಆಗ ಅನು ನಕ್ಕರೆ ಮನಸ್ಸಿನಲ್ಲಿ ಏನೋ ಒಂದು ಬಗೆಯ ನೋವು.

ಆನಂದ ರೈಲಿನಿಂದ ನೇರವಾಗಿ ತರಗತಿಗೇ ನಡೆದ ಅನುವನ್ನು ನೋಡಿ ಆಗಲೇ ಒಂದು ವಾರಕ್ಕೂ ಹೆಚ್ಚಾಗಿತ್ತು. ಒಂದು ವಾರದಿಂದಲೂ ತಾಯಿಯನ್ನು ನೋಡಿಕೊಳ್ಳುವುದರಲ್ಲೇ ಆಗಿತ್ತು. ಸದ್ಯ ಅವರಿಗೂ ಕೊಂಚ ವಾಸಿಯಾದುದರಿಂದ ಅವನಿಗೂ ಬಿಡುವಾಗಿತ್ತು. ಎಂದಿನಂತೆಯೇ ಕ್ಲಾಸಿನೊಳಕ್ಕೆ ಹೋಗಿ ಕುಳಿತ.

ಇನ್ನೂ ಅಧ್ಯಾಪಕರು ತರಗತಿಗೆ ಬಂದಿರಲಿಲ್ಲ ಅನು ತನ್ನ ಮುಂದೆ ಒಂದೆರಡು ಗುಲಾಬಿಯ ಹೂಗಳನ್ನಿಟ್ಟುಕೊಂಡು ಮುಡಿದುಕೊಳ್ಳುತ್ತಿದ್ದಳು. ಆನಂದನ ಧಮನಿಯಲ್ಲಿ ರಕ್ತ ಬಿರುಗಾಳಿಯಷ್ಟು ಬಿರುಸಾಗಿತ್ತು. ಅನು ಒಂದು ಬಿಳಿಯ ಗುಲಾಬಿಯನ್ನು ಕೈಗೆತ್ತಿಕೊಳ್ಳುವ ವೇಳೆಗೆ ರಾಜು ಒಳಕ್ಕೆ ಬಂದ. ಅನು ಅವನ ಕಡೆಗೆ ತಿರುಗಿ ನಸುನಕ್ಕಳು. ರಾಜುವೂ ನಗುನಗುತ್ತ ಹತ್ತಿರ ಬಂದ.

" ಆ ಹೂವು ಬಹಳ ಸುಂದರವಾಗಿದೆ " ಎಂದ ರಾಜು.

" ನಿಮಗೆ ಬೇಕೇನು ? "

ಅನು ತನ್ನ ಜಡೆಯ ಬಳಿಗೆ ತೆಗೆದುಕೊಂಡು ಹೋಗಿದ್ದ ಆ ಹೂವನ್ನು ರಾಜುವಿನ ಕೈಗೆ ಕೊಟ್ಟಳು. ರಾಜು ಮೃದುವಾಗಿ ಅದನ್ನೊಮ್ಮೆ ಮೂಸಿ ನೋಡಿ " ನೀವೇ ಮುಡಿದುಕೊಳ್ಳಿ " ಎಂದು ಹಿಂದಕ್ಕೆ ಕೊಟ್ಟ. ಅನು ಹೂವನ್ನೆತ್ತಿ ಮುಡಿದುಕೊಂಡಳು.

ಒಂದೆರಡು ನಿಮಿಷದಲ್ಲಿಯೇ ಅಧ್ಯಾಪಕರು ಬಂದರು. ಪಾಠ ಆರಂಭವಾಯಿತು. ಥಾಮಸ್ ಹಾರ್ಡಿಯ ಕಾದಂಬರಿಯಲ್ಲಿ ಒಂದು ಸನ್ನಿವೇಶ ನಾಯಕ ನಾಯಿಕೆಯರು ಜತೆಯಲ್ಲಿದ್ದಾರೆ. ಇದುವರೆಗೂ ಒಬ್ಬರಾದರೂ ತಮ್ಮ ಪ್ರೇಮವನ್ನು ಹೊರಗೆಡವಿಲ್ಲ. ಹೆಣ್ಣು ಹೇಳಲಿ ಮೊದಲೆಂದು ಗಂಡು

ಗಂಡೇ ಮೊದಲು ಹೇಳಲೆಂದು ಹೆಣ್ಣು. ಹೀಗಾಗಿ ಪ್ರೇಮಪ್ರಕಟನೆಯಾಗಿರಲಿಲ್ಲ ಆಗ ಕಾದಂಬರಿಕಾರ ಅದರ ಮೇಲೆ ತನ್ನ ಅಭಿಪ್ರಾಯ ತಿಳಿಸಿದ್ದುದನ್ನು ಅಧ್ಯಾಪಕರು ವಿವರಿಸಿದರು.

“ಹೆಂಗಸು ತಾನಾಗಿಯೇ !ಮೊದಲಿಗೆ ತನ್ನ ಪ್ರೇಮವನ್ನು ಹೊರಗೆಡವುವುದಿಲ್ಲ. ಗಂಡಸು ಅದಕ್ಕಾಗಿ ಕಾದುಕುಳಿತರೆ ಅದರಿಂದ ಏನೂ ಪ್ರಯೋಜನವಿಲ್ಲ. ಹೆಣ್ಣಿಗೆ ಸಹಜವಾದ ನಾಚಿಕೆಯಿಂದ ಮೊದಲೇ ಪ್ರೇಮ ತಿಳಿಸುವುದು ಸಾಧ್ಯವಾಗದು” ಎಂದರು ಅಧ್ಯಾಪಕರು.

ಆನಂದ ಕಲ್ಪನೆಯಲ್ಲಿ ತಾನು ಅನುವಿನ ಮುಂದೆ ನಿಂತಂತೆಯೂ ಅವಳ ಕಣ್ಣುಗಳ ಆಳವಾದ ಮೌನದಲ್ಲಿ ಹೃದಯದ ಪ್ರೇಮದ ಪ್ರತಿಬಿಂಬ ಕಂಡಂತೆಯೂ ಕನಸು ಕಾಣುತ್ತಿದ್ದ. ಅಧ್ಯಾಪಕರ ಮಾತು ಕೇಳಿದೊಡನೆಯೇ ಅನು ರಾಜುವಿನ ಕಡೆಗೆ ತಿರುಗಿ ಕಣ್ಣಿನ ಸುಳಿಯಲ್ಲಿ ಕಮಲದ ನಗೆ ಬೀರಿದುದನ್ನು ಆನಂದ ಕಾಣಲಿಲ್ಲ.

× × × × ×

ಸಂಜೆ ಎಲ್ಲರೂ ವಿಹಾರ ಹೊರಟಿದ್ದರು ಅಧ್ಯಾಪಕರೊಂದಿಗೆ ಹರಟೆ ಹೊಡೆಯುತ್ತಾ ಎಲ್ಲರೂ ಮುಂದೆ ಮುಂದೆ ಹೋಗುತ್ತಿದ್ದರು. ಆನಂದ ಅವರಿಂದ ಒಂದೆರಡು ಹೆಜ್ಜೆ ಹಿಂದುಗಡೆ ಭಾರವಾದ ಹೃದಯಹೊತ್ತು ಬರುತ್ತಿದ್ದ. ಮನಸ್ಸಿನಲ್ಲಿ ಏನೇನೋ ಯೋಚನೆ. ತನ್ನದೇ ಯೋಚನೆ—ತಾಯಿಯ ಯೋಚನೆ—ಅನುವಿನ ಯೋಚನೆ !

ಅನು ಮುಂದೆ ಹೋಗುತ್ತಿದ್ದವಳು ಒಂದೇ ಸಮನಾಗಿ ಹರಟೆಕೊಚ್ಚುತ್ತಿದ್ದಳು. ಚಂದ್ರೋದಯವಾಗುತ್ತಿತ್ತು. ಕೇಸರಿಯ ಕಿರಣಗಳಲ್ಲಿ ಗಿಡಮರಗಳ ಎಲೆಗಳು ಹೊಳೆಯುತ್ತಿದ್ದುವು. ಮರದೆಲೆಗಳಿಂದ ತೊಟ್ಟಿಕ್ಕುತ್ತಿದ್ದ ಒಂದೆರಡು ಹನಿಗಳು ಮೆಲ್ಲಮೆಲ್ಲನೆ ಬೆಳ್ಳಿಯವಾದುವು. ಆನಂದನಿಗೆ ಹೃದಯ ಕಲಕಿದಂತಾಯಿತು. ಅನುವನ್ನು ಮಾತನಾಡಿಸುವ ಎಂದು ಮುಂದೆ ಹೆಜ್ಜೆಯಿಟ್ಟ. ಅನುವಿನ ಜಡೆಯಮೇಲಿನ ಗುಲಾಬಿ ಹೂವು ಈಗಲೋ ಆಗಲೋ ಬೀಳುವಂತೆ ಜೋಲಾಡುತ್ತಿತ್ತು. ಇನ್ನೇನು ಬೀಳಬೇಕು ಎನ್ನುವಷ್ಟರಲ್ಲಿ

ಪಕ್ಕದಲ್ಲಿದ್ದ ರಾಜು ಕೈ ಚಾಚಿ ಅದನ್ನು ಹಿಡಿದುಕೊಂಡ ಅವನ ಕೈ ಅನುವಿನ ಕೊರಳಿಗೆ ತಾಗಿತು. ಅನು ತಟ್ಟನೆ ರಾಜುವಿನ ಕಡೆ ತಿರುಗಿದಳು ಅವಳ ಹೊಳೆಯುತ್ತಿದ್ದ ಕಣ್ಣುಗಳಲ್ಲಿ ರಾಜುವಿಗಾಗಿ ಅವಳ ಹೃದಯದ ಪ್ರೇಮವೆಲ್ಲಾ ಕುಣಿಯಿತು. ಆನಂದನ ಕಾಲು ನಿಂತಲ್ಲಿಯೇ ಚಣಕಾಲ ನಿಂತಿತು!

ಆನಂದನಿಗೆ ತಕ್ಷಣ ಗೊತ್ತಾಗಿ ಹೋಯಿತು. ತನ್ನ ಪ್ರೇಮದ ಪರ್ಯವಸಾನ ಹೀಗೆಂದು ಹೃದಯಕ್ಕೆ ಅರಿವಾಯಿತು. ಸುತ್ತೆಲ್ಲಾ ಬೇಕು—ತನಗೆ ಕತ್ತಲು. ಈ ಕತ್ತಲಿನಿಂದ ತಪ್ಪಿಸಿಕೊಂಡು ಹೊರಕ್ಕೆ ಹೋಗುವ ಬಗೆಯೇ ಅವನಿಗೆ ತಿಳಿಯದು. ಮನಸ್ಸು, ಹೃದಯ, ಜೀವನವೆಲ್ಲಾ ಕತ್ತಲು!

ಮನಸ್ಸು ಸ್ಥಿರವಾಗಿರಲಿಲ್ಲ. ಸುಮ್ಮನೆ ವಿಲವಿಲನೆ ಒದ್ದಾಡಲಾರಂಭಿಸಿತ್ತು. ಏನು ಮಾಡಿದರೂ ಶಾಂತಿಯಿಲ್ಲ. ಬಹಳ ಕಷ್ಟದಿಂದ ಉಳಿದವರ ಜತೆಗೇ ವಿಹಾರಕೂಟ ಮುಗಿಯುವವರೆಗೂ ಕುಳಿತಿದ್ದ. ಅವರೆಲ್ಲಾ ಏನು ಮಾತಾಡುತ್ತಿದ್ದರೋ ಅದೊಂದೂ ಅವನಿಗೆ ತಿಳಿಯದು. ತೆಪ್ಪಗೆ ಜೋಲು ಮುಖದಿಂದ ಒಂದುಕಡೆ ಕುಳಿತಿದ್ದ. ಅದು ಮುಗಿದೊಡನೆಯೇ ಬಂದು ರೈಲು ಹತ್ತಿ ಹಳ್ಳಿಗೆ ಹೊರಟ.

ರೈಲು ಮೈಸೂರು ಬಿಟ್ಟೊಡನೆಯೇ ಅವನ ಗಾಡಿಯಲ್ಲಿ ಕುಳಿತಿದ್ದ ಭಿಕ್ಷುಕನೊಬ್ಬ ಹಾಡಲಾರಂಭಿಸಿದ. ಇದ್ದಕ್ಕಿದ್ದಂತೆ ಗಾಡಿಯಲ್ಲಿ ಸ್ತಬ್ಧತೆ ಮೂಡಿ ಅದನ್ನೊಡೆದು ಭಿಕ್ಷುಕನ ತುಂಬುಕಂಠದ ದನಿ ಮಾತ್ರ ಕೇಳುತ್ತಿತ್ತು. ಕಿಟಕಿಯ ಪಕ್ಕದಲ್ಲಿ ಕುಳಿತಿದ್ದ ಆನಂದ ಮೆಲ್ಲನೊಮ್ಮೆ ಭಿಕ್ಷುಕನ ಕಡೆಗೆ ತಿರುಗಿ ಅವನನ್ನು ನೋಡಿದ. ಕಣ್ಣಿನಲ್ಲಿ ನೀರು ಹನಿಯಿತು— ಭಿಕ್ಷುಕ ತುಂಬುದನಿಯಲ್ಲಿ ಆರಂಭಿಸಿದ—

"ದುನಿಯಾ ಕ್ಯಾಹೈ ಏಕ್ ತಮಾಷಾ
ಚಾರ್ ದಿನೋಂಕೀ ಝೂಠೀ ಆಶಾ
ಪಲಮೆ ತೋಲಾ ಪಲಮೇ ಮಾಷಾ—"

ಆನಂದ "ಎಷ್ಟು ಸತ್ಯ" ಎಂದುಕೊಂಡು ಜೇಬಿನಿಂದೊಂದು ಮೂರು ಕಾಸಿನ ಬಿಲ್ಲಿ ತೆಗೆದು ಭಿಕ್ಷುಕನಿಗೆ ಕೊಟ್ಟ. ಭಿಕ್ಷುಕ ಅವನಿಗೆ ಸಲಾಮು ಹಾಕಿ ಮತ್ತೊಂದು ಹಾಡನ್ನಾರಂಭಿಸಿದ—

"ಜಗವೊಂದು ಬಂದರೀ ಜೀವಸಾಗರದಲ್ಲಿ
ಹಡಗುಗಳು ಐತಂದು ಕೂಡುವುವು ದಿನವು
ವಿಧವಿಧದ ಜನರಿಹರು. ತೆರೆತೆರೆದ ಭಾವಗಳು
ಚಣಕಾಲ ಸಂಧಿಸುತ ಮೆರೆವುವಿಲ್ಲಿ!
ನಾಲ್ಕು ದಿನಗಳ ಜೀವ—ಒಂದಿರುಳ ಪ್ರೇಮ
ಮುಂದೆಲ್ಲಿಗೋ ಪಯಣ, ಎಂದೊ ಮಿಲನ
ಪಯಣದಲಿ ಸಾಗರದಿ ಕಡುತೆರದ ಕಷ್ಟಗಳು
ಕಾದಿಹುದು ಮುಂದೇನೊ ಅರಿತವರು ಆರು?"

"ಹುಂ—ಅರಿತವರು ಆರು? ತನ್ನ ಜೀವನದಲ್ಲಿ ಇಂತಹ ಬದಲಾವಣೆಗಳೆಲ್ಲಾ ಆಗುವುವೆಂದು ತನಗೆ ತಿಳಿದಿತ್ತೆ—ನೂರುಬಗೆಯ ಬದಲಾವಣೆ. ಲಲಿತಳ ಸಾವಿನ ದುರಂತ, ಈಗ ಅನುವಿನೊಂದಿಗೆ ಪ್ರೇಮ—ಅದೂ ಒಂದು ದುರಂತ—"

ಆನಂದ ಕಿಟಕಿಯಿಂದ ಹೊರಕ್ಕೆ ನೋಡಿದ. ಆಕಾಶದಲ್ಲಿ ನಕ್ಷತ್ರಗಳು—ಮಿನುಗುತ್ತಿದ್ದುವು ನಾಚಿಕೆಯಿಂದಲೋ ಏನೋ ಒಂದೊಂದು ನಕ್ಷತ್ರ ಮುಖ ಮರೆ ಮಾಡಿಕೊಳ್ಳುತ್ತಿತ್ತು— ಮತ್ತೆ ಹೊರಬಂದು ನಗುತ್ತಿತ್ತು ತಂಗಾಳಿ ಮನಸ್ಸಿನ ಕಾವನ್ನು ಕೊಂಚ ತಗ್ಗಿಸಿತು!

"ಆ ನಕ್ಷತ್ರ ಎಷ್ಟು ಸೊಗಸಾಗಿದೆ. ಆದರೆ ಅದಕ್ಕೆ ಹೃದಯವಿದೆಯೇ? ಸೌಂದರ್ಯವಿದ್ದರೇನು?— ಒಳಗಿರುವುದು ಮಾತ್ರ ಕಲ್ಲು ಅನು ಕೂಡ ನನ್ನ ಪಾಲಿಗೆ ಹಾಗೆಯೇ! ಹೊರಗೆ ಗುಲಾಬಿ, ಒಳಗೆ ಹೃದಯ ಕಾಡಿಗೆಯ ಭೂಮಿ!"

"ಇಷ್ಟಾಗಿಯೂ ನಾನು ಅನುವನ್ನು ಪ್ರೇಮಿಸಿದುದೂ ತಪ್ಪು ಹುಲ್ಲು ಗರಿಕೆ ತನ್ನ ಸ್ಥಾನಸ್ಥಿತಿ ತಿಳಿಯದೆ ಆಕಾಶದ ನಕ್ಷತ್ರವನ್ನು ಪ್ರೀತಿಸಿದರೆ! ಬೆಡಗು ಬಿನ್ನಾಣ ಸೌಂದರ್ಯ ಸೊಬಗುಗಳ ಗಣಿ ನಕ್ಷತ್ರ ನೀಲಗಗನದಲ್ಲಿ ಬೆಳಗುವುದನ್ನು ಕಂಡ ಗರಿಕೆ ಅದಕ್ಕಾಗಿ ಹಾತೊರೆದರೆ—ನಕ್ಷತ್ರ ಕೆಳಕ್ಕಿಳಿದೀತೇ? ಗರಿಕೆ ವಿರಹದಲ್ಲಿ ಬಾಡಿ ಸೊರಗಬೇಕು ಅಷ್ಟೇ!"

"ಆದರೆ—ಇದು ನನ್ನ ತಪ್ಪೇ? ಪ್ರೇಮದ ಕೊನೆ ಹೀಗಾಗಬೇಕೇ? ಮನುಷ್ಯನಿಗೆ ಹೃದಯವಿರುವುದೇ ತಪ್ಪೇ?" ಆನಂದನಿಗೆ ತಿಳಿವಿಗೆ ಮಬ್ಬು

ಕವಿದಂತಾಯಿತು. ವಿಚಾರವೆಲ್ಲಾ ಎಲ್ಲಿಯೋ ಮಾಯವಾದಂತಾಯಿತು. ಸುತ್ತೆಲ್ಲ ಕತ್ತಲು. ರೈಲು ಕೂಗುತ್ತಾ ಹಳಿಯ ಮೇಲೆ ಹರಿದುಹೋಯಿತು.

× × × × ×

ಕಾಲುವೆಯ ನೀರು ಸಪ್ಪಳವಿಲ್ಲದೆ ಹರಿಯುತ್ತಿತ್ತು. ಅಲೆಗಳೆಲ್ಲಾ ಸೂರ್ಯರಶ್ಮಿಯಲ್ಲಿ ಬೆಳಗುತ್ತಿದ್ದುವು. ಆಗಾಗ ನೀರಿನಲ್ಲಿ ತೇಲಿ ಬರುತ್ತಿದ್ದ ಹುಲ್ಲುಜೊಂಡು ದಡದಲ್ಲಿ ನಿಲ್ಲುತ್ತಿತ್ತು. ಆನಂದ ಕಾಲುವೆಯಲ್ಲಿ ಕಾಲಿಳಿಬಿಟ್ಟುಕೊಂಡು ಕುಳಿತಿದ್ದ. ರಾತ್ರಿ ರೈಲಿನಲ್ಲಿ ಬಂದವನು. ರಾತ್ರಿಯೆಲ್ಲಾ ನಿದ್ರೆ ಮಾಡಲಾಗಿರಲಿಲ್ಲ. ಬೆಳಗ್ಗೆ ತಾಯಿಗೆ ಗಂಜಿ ಕಾಸಿಕೊಟ್ಟು, ಕಾಫಿ ಕುಡಿದು ಕಾಲುವೆಯ ಹತ್ತಿರ ಬಂದಿದ್ದ. ಮನಸ್ಸು ಭಾರವಾಗಿತ್ತು. ತಲೆ ಕಾಯುತ್ತಿತ್ತು. ಎರಡು ದಡಗಳನ್ನೂ ಒಂದೇ ಸಮನಾಗಿ ದಿಟ್ಟಿಸುತ್ತಿದ್ದವನು ನಿಟ್ಟುಸಿರಿಟ್ಟು ಎದ್ದುನಿಂತ.

"ಕಾಲುವೆಯ ದಡಗಳು ಒಂದಕ್ಕೊಂದು ಎಷ್ಟು ಹತ್ತಿರದಲ್ಲಿವೆ. ಆದರೂ ಒಂದಕ್ಕೊಂದು ಎಷ್ಟು ದೂರ. ಎರಡು ಮಾರು ದೂರದಲ್ಲಿದ್ದರೂ ಎರಡು ಧ್ರುವಗಳಂತರ! ಎಂದಿಗೂ ಎರಡು ದಡಗಳು ಸೇರಲಾರವು. ಹಾಗೆಯೇ ನಾನು, ಆನು ಎಂದಿಗೂ ಸೇರಲಾರೆವು" ಎಂದುಕೊಂಡು ಮನೆಗೆ ಹಿಂತಿರುಗಿದ.

ಆನಂದ ಮನೆಗೆ ಬರುವ ವೇಳೆಗಾಗಲೇ ಪಾರ್ವತಮ್ಮನವರಿಗೆ ಜ್ವರ ಮರುಕಳಿಸುತ್ತಿತ್ತು. ನಿಂತುಹೋಗಿದ್ದ ಜ್ವರ ಏರಲಾರಂಭಿಸಿತು. ತಕ್ಷಣ ಇಳಿದಂತೆ ತಕ್ಷಣ ಏರಿ ೧೦೪ನ್ನು ಮುಟ್ಟಿತು. ಪ್ರಜ್ಞೆ ತಪ್ಪಿ ಹೋದಂತಾಗಿ ಹುಚ್ಚುಹುಚ್ಚಾಗಿ ಕೂಗಲಾರಂಭಿಸಿದರು. ಆನಂದ ಮೌನವಾಗಿ ತಾಯಿಯ ಪಕ್ಕದಲ್ಲಿ ಕುಳಿತಿದ್ದ.

"ಲಲಿತಾ—ಲಲಿತಾ—ನಾಗು ಅಳುತ್ತಾಳಲ್ಲೇ, ಎತ್ತಿಕೊಳ್ಳೇ"

"ಇನ್ನೆಲ್ಲಿಯ ಲಲಿತಾ—ಎಲ್ಲರನ್ನು ತಬ್ಬಲಿ ಮಾಡಿಹೋದಳು. ಲಲಿತಾ! ಲಲಿತಾ!"

"ಅಯ್ಯೋ ರಾಮ! ಈ ಸಂಕಟ ತಡೆಯಲಾರೆನಪ್ಪಾ!"

" ಆನಂದ ಸದ್ಯ ಕಾಲೇಜು ಸೇರಿದ. "

ಆನಂದ ಮಾತನಾಡದೆ ತಾಯಿಯ ಪಕ್ಕದಲ್ಲಿ ಕುಳಿತಿದ್ದ. ಅವರ ಹೊರಳಾಟದಲ್ಲಿ ಕೈ ಅವನ ಕೈ ಮೇಲೆ ಕೂತಿತು. ಪಾರ್ವತಮ್ಮನವರೊಮ್ಮೆ ಅಗಲವಾಗಿ ಕಣ್ಣು ಬಿಟ್ಟು ಅವನ ಕಡೆಗೇ ನೋಡಿದರು. ಆನಂದನ ಕಣ್ಣಿನಲ್ಲಿ ಕಟುತ್ವ-ಶೀತಲತೆ ಮನೆಮಾಡಿಕೊಂಡಿದ್ದುವು. ಪಾರ್ವತಮ್ಮನವರ ಕೈಯಿನ ಕಾವು ಕೊಂಚಕೊಂಚವಾಗಿ ಕಡಿಮೆಯಾಗುತ್ತಾ ಬಂತು. ಅವರ ಕೈಯಿದ್ದ ಆನಂದನ ಕೈ ಅಲುಗಾಡದೆ ಹಾಗೆಯೇ ಹಾಸಿಗೆಯ ಮೇಲೆ ಬಿದ್ದಿತ್ತು.

ಹಕ್ಕಿಗಳೆಲ್ಲಾ ಗೂಡುಗಳಿಗೆ ಹಿಂತಿರುಗುತ್ತಿದ್ದುವು. ಗಿಡಮರಗಳೆಲ್ಲಾ ಬಿಸಿಲಿನಲ್ಲಿ ಸೊರಗಿ ಹಣ್ಣೆಲೆಗಳೆಲ್ಲಾ ಉದುರಿದ್ದುವು. ದೂರದಲ್ಲಿ ಮೇಯುತ್ತಿದ್ದ ದನದ ಹಿಂಡು ಊರಿನ ಕಡೆಗೆ ಸಾಗುತ್ತಿತ್ತು. ಅದನ್ನು ಅಟ್ಟಿಕೊಂಡು ಬರುತ್ತಿದ್ದ ದನಕಾಯುವ ಹುಡುಗ ಎಮ್ಮೆಯೊಂದರ ಬೆನ್ನಮೇಲೆ ಕುಳಿತು " ಹೇಯ್, ಹೇಯ್ " ಎನ್ನುತ್ತಿದ್ದ. ಉಳಿದ ಹುಡುಗರು ಅವನನ್ನು " ಯಮಾ ಕಣ್ಲಾ, ವಾರೆ ಯಮಾ, ಯಾನೋ ಸಾಯ್ನೋಕೋಗ್ತಾ ಅವ್ನೆ " ಎಂದು ಹಾಸ್ಯಮಾಡಿ ನಗುತ್ತಿದ್ದರು. ಧೂಳು ಮೇಲೇರಿ ಸಂಜೆಯ ಸೂರ್ಯನ ಕಿರಣಗಳಲ್ಲಿ ಹೊಂಬಣ್ಣದ ಕಣದ ತೆರೆಯಂತೆ ಹೊಳೆಯುತ್ತಿತ್ತು. ಆನಂದ ಸ್ಮಶಾನದ ಮುಂದಿನ ಮುರುಕು ಮಂಟಪವನ್ನೊರಗಿಕೊಂಡು ನಿಂತಿದ್ದ. ಗೋಪುರ ಉರುಳಿ, ಮೆಟ್ಟಿಲುಗಳೆಲ್ಲಾ ಚೂರು ಚೂರಾಗಿ ಮೇಲ್ಭಾವಣಿಯೆಲ್ಲಾ ಕಿತ್ತುಹೋಗಿದ್ದ ಆ ಪರಿತ್ಯಕ್ತ ಮಂದಿರಕ್ಕೆ ಉಳಿದಿದ್ದುದು ಮುಂಭಾಗದ ಮುರುಕು ಮಂಟಪ ಮಾತ್ರ. ಕಾಲದ ಕಪ್ಪುಕೈಗೆ ಸಿಕ್ಕಿ ಮಂಟಪದ ಬಹುಭಾಗ ಬಿದ್ದುಹೋಗಿತ್ತು. ಆದರ ಅವಸಾನ ಶೇಷವಾಗಿ, ಕಳೆದಕಾಲದ ನೆನಪಿಗಾಗಿ ಉಳಿದುದೊಂದು ಕಂಬವನ್ನೊರಗಿಕೊಂಡು ನಿಂತಿದ್ದ ಆನಂದ— ಪರಿತ್ಯಕ್ತ ಮಂದಿರಕ್ಕೆ ಸರಿಯಾದ ಜೋಡಿ !

ಸ್ಮಶಾನದಲ್ಲಿ ಚಿತೆಯ ಮೇಲೆ ಶವ ಉರಿಯುತ್ತಿತ್ತು. ಹೊಗೆಯ ಮೋಡವನ್ನು ಛೇದಿಸಿಕೊಂಡು ಉರಿ ತನ್ನ ಕೆನ್ನಾಲಿಗೆಗಳನ್ನು ಒಮ್ಮೊಮ್ಮೆ ಚಾಚುತ್ತಿತ್ತು. ದೂರದಲ್ಲಿ ಯಾರೋ ಹಾಡಿಕೊಂಡು ಹೋಗುತ್ತಿದ್ದ ಹಾಡಿನ

ಒಂದೆರಡು ತುಣುಕನ್ನು ಬೀಸುತ್ತಿದ್ದ ಗಾಳಿ ತಂದು ಆನಂದನ ಕಿವಿಗೆ ಹಾಕಿತು—

"ಕಂಡೆಯೇನು, ಕಂಡೆಯೇನು ಜೀವನದ ಜಾಡು
ಕಾಣಲೇನು, ಕಾಣಲೇನು ಏಕಾಕಿ ಪಾಡು!

ಜೀವ ಸಂಗ್ರಾಮದಲಿ ಸೋಲು ನೆರೆಯಲ್ಲಿ
ಬರಲಾರರೊಬ್ಬರೂ ನಿನ್ನ ಜತೆ ಜನರು
ನಿನ್ನದಕೆ ನೀನೆ ಹೊಣೆ—ಓರ್ವನೇ ಕೈಯೆತ್ತಿ
ಸೆಣಸಬೇಕೈ ಮತ್ತೆ ಮಡಿಯಬೇಕು!"

ಗಾಳಿಯಲ್ಲಿ ಬರುತ್ತಿದ್ದ ಹಾಡಿನ ದನಿ ಕೊಂಚಕೊಂಚವಾಗಿ ತಗ್ಗುತ್ತ ಬಂತು. ಕಾಲುವೆಯ ದಡದಿಂದ ದೇಗುಲದ ಘಂಟಾನಾದ ಮುಸಕು ಮುಸಕಾಗಿ ಕೇಳಬಂತು. ಜತೆಗೆ ನವಿಲಿನ ಕೊರಗಿನ ಕೂಗೂ ದನಿಗೂಡಿಸಿತು. ಮುಳುಗುತ್ತಿದ್ದ ಸೂರ್ಯನ ಕಿರಣ ಎಲ್ಲೆಲ್ಲಿಯೂ ಎಲ್ಲವನ್ನೂ ಬಿಡಲಾರದೆ ಅಪ್ಪಿಕೊಂಡಿತ್ತು. ಚಿತೆಯ ಮೇಲೆ ಉರಿಯುತ್ತಿದ್ದ ಶವದ ಕೆಂಪುಜ್ವಾಲೆಗಳ ಬೆಳಕು ಆಗಾಗ ಆನಂದನ ಮುಖದಮೇಲೂ ಮುರುಕು ಮಂಟಪದ ಮೇಲೂ ಬೀಳುತ್ತಿತ್ತು. ಆನಂದನ ಮುಖವೂ ಅವನೊರಗಿಕೊಂಡಿದ್ದ ಮುರುಕುಮಂಟಪದಂತೆಯೇ!—— ಮುಳುಗುತ್ತಿದ್ದ ಸೂರ್ಯ ಅವನ ಮುಖದಲ್ಲಿ ಕೊನೆಯ ಬಾರಿ ಕಂಡುದು——ಶೂನ್ಯ!